ನಿನ್ನಿಂದಂ ತ್ರಿಭುವನರಾ
ಜ್ಯೋನ್ನತಿ ಬಂದೆನಗೆ ಸಾರ್ಗ್ಗಮಪ್ಪೊಡವೊಲ್ಲೆಂ
ನೀಂ ನುಡಿದು ಬರ್ದುಕಿದ್ಪೆ ಪೆಱ
ರೆನ್ನಿದಿರೊಳ್ ನುಡಿದು ಕರ್ಣನಂ ಬರ್ದುಕುವರೇ ||

ನುಡಿ ನಿನಗಂ ದಿನೇಶತನಯುಂಗಮದೆನ್ನಯ ಪಕ್ಕದಾದೊಡಂ
ಪಿಡುಕದೆ ಕೇಳ್ವೆನಲ್ಲಿ ಸಮುಸಿರ್ವ್ವರುಮಾತನತೀತನಾದ ಪಿಂ
ಬಡಿನೊಳದೆಂತು ಪೇಡ್ ಪಟಿಯೆ ಕೇಳ್ವೆನೊ ಕೇಳ್ವೊಡೆ ಚಿಃ ಪೆಱಂ ಪೆಱಂ
ನುಡಿದೊಡೆ ಕೇಳ್ದನೆಂದೆನಗೆ ನೋಯನೆ ಸಗ್ಗದೊಳಿರ್ದಿನಾತ್ಮಜಂ ||

ನಿನ್ನಿಂದ ಮೂರು ಲೋಕದೊಡೆತನವು ಬಂದರೂ ನನಗೆ ಬೇಕಿಲ್ಲ. ನೀನು ಹೇಳಿ ಬದುಕಿದೆ. ಮಿಕ್ಕವರು ನನ್ನೆದುರಿಗೆ ಕರ್ಣನನ್ನು ಹಳಿದು ಬದುಕುವರೇ? ಅವನು ಸತ್ತ ಬಳಿಕ ಅವನ ನಿಂದೆಯನ್ನು ನಾನೆಂತು ಕೇಳಲಿ! 'ಛೆ! ದುರ್ಯೋಧನನು ನನಗೆ ಆಪ್ತನಲ್ಲ. ಬೇರೆಯವರು ನನ್ನನ್ನು ದೂರಿದರೆ ಅದನ್ನೂ ಕೇಳಿದನು' ಎಂದು ಸ್ವರ್ಗದಲ್ಲಿರುವ ಕರ್ಣನು ನೊಂದುಕೊಳ್ಳನೇ ಎಂದು ಹೇಳಿ ಅಶ್ವತ್ಥಾಮನನ್ನು ಕಳುಹಿಸಿಬಿಟ್ಟನು.

ಹೀಗೆ ಕರ್ಣನಿಗಾಗಿ ದುರ್ಯೋಧನನು ದುಃಖಿಸಿದ್ದು ಸ್ವಲ್ಪವಲ್ಲ. "ನೀನು ಮಗಲ್ದೆಯಿನ್ನೆನಗೆ ಪೇಟ್ ಪೆಱರಾರ್?" "ನಿನ್ನನು ಕಿರೀಟಿಯ ಶಾತಶರಂಗಳಿಂದೆ ಪೋಪೊಡಮೆನಗಿನ್ನುಮಿಾಯೊಡಲೊಳಿರ್ದುದು ನಾಣಿಲಿ ಜೀವಂ" "ಅಱಿಯಂ ಸೋದರನೆಂದು ಧರ್ಮತನಯುಂ ನಿವ್ಯಾರ್ಜದಿಂ ನಿನ್ನ ನಾನರಿಱಿವೆಂ- - - ಅಱಿ ಪಲ್ಕೊಲ್ದೆನುಮಿಲ್ಲ ಕಾರ್ಯವಶದಿಂ" "ನಿನ್ನನಾಂ ನೆಱೆ ಕೊಂದೆಂ ಮುಳಿಸಿಂದಮುಂಗನೃಪತೀ, ಕೌಂತೇಯರೇಂ ಕೊಂದರೇ?" ಎಂದು ಕರ್ಣನೊಳಾದ ಶೋಕಾನಳನೊಳ್ ಬಾಯಟಿದು, ಮೆಯ್ಮಱೆದು ಪಳಯಿಸುತ್ತಿದ್ದನು. ಬಳಿಕ ಧೃತರಾಷ್ಟ್ರನು ಗಾಂಧಾರಿಯೊಡನೆ ಬಂದು, "ಇನ್ನಾದರೂ ಸಂಧಿಗೊಪ್ಪಿಕೋ. 'ಪಾಂಡವರಪ್ಪೊಡೆ ಎನಗೆ ಪಾಂಡುರಾಜಂಗೆ ಬೆಸಕೆಯ್ವುದುದನೆ ಬೆಸಕೆಯ್ವರ್'. ಎಂದುಂ ಮಿಾಱುವರಲ್ಲರ್ ಅವರನಾನೆಂತುಮೊಡಂಬಡಿಸಿ ನೀನೆಂದುದನೆನಿಸುವೆಂ. ಇದರ್ಕೆ ಮಾರ್ಕೊಳ್ಳದೊಡಂಬಡು; ನಿನ್ನಂ ಕೆಯ್ಯೊಡ್ಡಿ ಬೇಡಿದಪೆಂ" ಎಂದು ದೈನ್ಯದಿಂದ ಹೇಳಲು ದುರ್ಯೋಧನನು

ತಪ್ಪದು ಕರ್ಣನಿಂ ಬಟಿಕೆ ಸಂಧಿಯ ಮಾತೆನಗಾತನಿಲ್ಲದೆಂ
ತಪ್ಪುದೊ ರಾಜ್ಯಮಿಾ ಗದೆಯುಮಿಾ ಭುಜದಂಡಮುಮುಳ್ಳಿನಂ ಕೊನ
ರ್ತಪ್ಪುದೆ ಪೇಟಿಮೆನ್ನ ಪಗೆ ನೋವಱಿದಂಜುವುದೇಕೆ ನಿಂದರೇಂ
ತಪ್ಪುದೊ ಪೇಟಿಮಯ್ಯ ನೊಸಲೊಳ್ ಬರೆದಕ್ಕರಮುಂ ವಿಧಾತ್ರನಾ ||

ತಲೆದೋಱಲ್ಕಣಮಳ್ಕಿ ವೈರಿನೆಲನಂ ಪೋ ಪೊಕ್ಕನೆಂಬನ್ನೆಗಂ
ಚಲದಿಂದೆಯ್ದುವ ಕರ್ಣನುಗ್ರರಥಮಂ ಮುಂ ನುಂಗಿದೀ ದ್ರೋಹಿಯೊಳ್
ನೆಲದೊಳ್ ಪಂಬಲೆ? ಮತ್ತಮೆನ್ನ ಮುಳಿಸಿಂಗಾಂ ಕಾದುವೆಂ ಪೇಸಿದೆಂ
ನೆಲೆಗಂಡಂತೆ ನೆಲಕ್ಕೆ ಗೆಲ್ದೊಡಮದಂ ಚೀ ಮತ್ತಮಾನಾಳ್ವೆನೇ ||

ನರನಂ ಮುಂ ಕೊಲ್ವೆನಾಂ ಕರ್ಣನನಟಿದುದಱಿಂ ಕೊಲ್ವೆನಾ ಭೀಮನಂ ಸಂ
ಗರದೊಳ್ ಸೀಳ್ದೊಟ್ಟಿ ದುಶ್ಶಾಸನನಟಲನದಂ ನೀಗುವೆಂ ಪೋಕುಮಂತಿ
ರ್ದರುಮಂ ಕೊಂದಂದು, ಮೇಣಾನವರಿದಿರಿದಿರೊಳ್ ಕಾದಿ ಸತ್ತಂದು ಮೇಣ್ ವಿ
ಸ್ಫುರಿತಂ ಮತ್ಕೋಪಮುಂ ನಿಮ್ಮಡಿಯುಮನಿದೆ ಬೀಡ್ಕೊಂಡೆನಿಂ ಪೋಗಿಮೇಟಿಂ ||

ಎಂದು ನಿರ್ದಾಕ್ಷಿಣ್ಯವಾಗಿ ನುಡಿದು ಅವರನ್ನು ಕಳುಹಿಸಿಬಿಟ್ಟನು.

ಮುಂದೆ ರಣರಂಗದಲ್ಲಿ ಹೋಗುತ್ತಿರುವಾಗ ಸಂಜಯನು ಕರ್ಣನ ಕಳೇಬರ ವನ್ನು ತೋರುವನು. ಅದೆಂತಿರುವುದೆಂದರೆ:

ನರಶರಘಾತದಿಂ ಪಱಿದು ಪಚ್ಚಿಸಿದಂತೆವೊಲಿರ್ದ ಮೆಯ್ ಭಯಂ
ಕರತರಮಾಗೆ, ಮುಯ್ಯವರೆಗಂ ತೆಗೆದಂಬಿನ ಮುಷ್ಟಿ ಬಿನ್ನಣಂ
ಬೆರಸಿರೆ, ಪೋದ ಪಂದಲೆಯೊಳಾದ ಮುಗುಳ್ನಗೆ ಭೀತರಾದರೆ
ಲ್ಲರುಮನಳುರ್ಕೆಯಿಂ ನಗುವವೋಲ್ ರವಿನಂದನನಿತ್ತಲಿರ್ದಪಂ ||

ಅದನ್ನು ಕೇಳಿದೊಡನೆ "ಎತ್ತಿರುತ್ತುಂ, ಎಲ್ಲಿದಂ? ಎತ್ತಣಂ? ಎಂದು ಕರ್ಣನ ಕಳೇವರಮಂ ನೋಡಿ, ನೋಡಲಾಱದೆ ಮೂರ್ಛೆವೋಗಲ್ ಬಗೆದಂ," ಸಂಜಯನು ದುರ್ಯೋಧನನನ್ನು ಬೀಳದಂತೆ ತಬ್ಬಿಹಿಡಿದುಕೊಂಡ ಮೇಲೆ ಅವನು 'ಚೆಚ್ಚರಿಸಿ ಕೂರ್ಮೆ ಕೆಮ್ಮಿಕ್ಕು ಬರೆ ಸೈರಿಸಲಾಱದೆ'

ಬೆಸನೆಡೆಗಳ್ಗೆ ತೊಟ್ಟು, ಬೆಸನಂಗಳವುಂಕಿದೊಡಾಗದೆಂದು ಬ
ಗ್ಗಿಸುವೆಡೆಗಾಳ್ದನಿಂತು ನೆಗಟ್ೆಂಬೆಡೆಯೊಳ್ ಗುರು, ಪೆಚ್ಚಿದೊಂದು ಬೇ
ವಸದೆಡೆಗಾಶ್ರಯಂ, ಮನಮನೊಪ್ಪಿಸುವೀಯೆಡೆಯೊಳ್ ಮನಂ, ವಿಚಾ
ರಿಸುವೊಡೆ ಕರ್ಣನಲ್ಲದೆನಗಾವೆಡೆಗಂ ಪೆಱನೊರ್ವನಾವನೋ ||

ನೆಲನಂ ಕೊಟ್ಟನಿನಾತ್ಮಜಾತನೆನಗಾಂ ತಕ್ಕೊರ್ವೆಯಿಂದಂ ಜಳಾಂ
ಜಲಿಯಂ ಕೊಟ್ಟನುಮಿಲ್ಲ; ಸೂರ್ಯತನಯಂ ತೇಜೋಗ್ನಿಯಿಂದಂ ದ್ವಿಷ
ದ್ಬಲಮಂ ಸುಟ್ಟನುದಾತ್ತಪುಣ್ಯನವನಂ ಚೈತಾಗ್ನಿಯಿಂ ಸುಟ್ಟೆನಿ
ಲ್ಲೊಲವಿಂದಿಂತೆರ್ದೆಮುಟ್ಟಿ ಕೂರ್ತನೊಳನೇ ಕರ್ಣಂಗೆ ದುರ್ಯೋಧನಂ ||

ಎಂದು ತನ್ನ ಸರ್ವಸ್ವವೂ ಕರ್ಣನೇ; ಅವನಳಿದಮೇಲೆ ತನಗೆ ಬಾಳು ಬೇಕಿಲ್ಲವೆಂದು ಬಾಯ್ಬಿಟ್ಟು ಗೋಳಿಟ್ಟು ಕಣ್ಣೀರ್ದೊರೆಯನ್ನು ಹರಿಸಿಬಿಟ್ಟನು.

## ಕರ್ಣನ ಸ್ವಾಮಿಭಕ್ತಿ

ಈ ಬಗೆಯ ದುರ್ಯೋಧನನ ಅತ್ಯುತ್ತಮ ವಿಶ್ವಾಸಗೌರವಗಳಿಗೆ ಕರ್ಣನು ನಿಜವಾಗಿಯೂ ಪಾತ್ರನೇ ಅಹುದು. ದುರ್ಯೋಧನನ ಆಶ್ರಿತರಲ್ಲಿ ಕರ್ಣನಷ್ಟು ಸ್ವಾಮಿಭಕ್ತಿಯು ಮತ್ತಾರಲ್ಲೂ ಇರಲಿಲ್ಲ. ದುರ್ಯೋಧನನು ಕರ್ಣನನ್ನು 'ಕೆಳೆಯ' ನೆನ್ನುತ್ತಿದ್ದರೂ ಇವನೇನೋ ಅವನನ್ನು ಸ್ವಾಮಿಯೆಂದೇ ಕರೆಯುತ್ತಿದ್ದನು. ಇವನಿಗೆ ವೀರಪಟ್ಟವನ್ನು ಕಟ್ಟಿದಾಗ "ನಿನ್ನಾಳ್ಗಳೊಳ್ ಆನಾರ ದೊರೆ? ಎನಗೆ ಕಾರುಣ್ಯಂಗೆಯ್ವೆಯಾಗಿ ಬೆಸಸಿದ ನಿನ್ನ ದಯೆಗೆಯ್ದ ವೀರಪಟ್ಟಮೆಂಬುದು ಎನಗೆ ಎಣ್ಬೆರಲ ಪಟ್ಟಂ" ಎಂದು ಕೃತಜ್ಞತೆಯಿಂದ ಹೇಳಿದನು. ಅವನ ಮನದಲ್ಲಿ ಯಾವಾಗಲೂ ನಿಂತಿದ್ದುದು ಆಳ್ದನ ಹಿತ. ಅದಕ್ಕಿಂತ ಬೇರೆ ಅವನಿಗೇನೂ ಬೇಡ. ಅದಕ್ಕಾಗಿ ಗಂಟುನಂಟನ್ನೂ, ಗುರುಹಿರಿಯರನ್ನೂ, ಕೊನೆಗೆ ಪ್ರಾಣವನ್ನೂ ಒಪ್ಪಿಸಲು ಸಿದ್ಧ. ಕೊನೆಗೆ ಅವನು ಮಾಡಿದುದೂ ಹಾಗೆಯೇ.

ದುರ್ಯೋಧನನು ಸಂಧಿಗೊಪ್ಪದಿರಲು ಕೃಷ್ಣನು "ಗುರುತನೂಜನ ಕೆಯ್ಯಂ ಪಿಡಿದರಮನೆಯಿಂ ಪೊಱಮಟ್ಟು ಕಪಟಪ್ರಪಂಚದಿಂದಾತನುಮಂ ತನಗೆ ಮಾಡಿ, ಬೀಡಿಂಗೆವಂದು ಕುಂತಿಗೇಕಾಂತದೊಳಿಂತೆಂದನು."

> ಗುರು ಕೃಪ ಶಲ್ಯ ಸಿಂಧುಸುತರಪ್ಪೊಡೆ ನಮ್ಮಯ ಪಕ್ಷಮೊಂದಿದಂ
> ಗುರುಸುತನೀಗಳೆಮ್ಮೊಳಖಿಳಾಸ್ತ್ರವಿಶಾರದನಪ್ಪನುಂ ಗೆಲ
> ಲ್ಕರಿಯನುಮೊಂದಿ ಬಾರದನುಮಂಕದ ಕರ್ಣನೆ ಬೀರನಾತನಿಂ
> ದುಱಿಪರಿದತ್ತು ಚಾಗಮುವನಿಂದೆಸೆದತ್ತು ಸಮಸ್ತಧಾತ್ರಿಯೊಳ್ ||

ಎಂದು ಕರ್ಣನ ಸ್ವಾಮಿನಿಷ್ಠೆಯನ್ನೂ ಅಭೇದ್ಯತ್ವವನ್ನೂ ಹೊಗಳಿ, ಬಳಿಕ "ನಾನುಂ ಎನ್ನ ಬಲ್ಲ ಮಾಡ್ಕೆಯಿಂ ಭೇದಿಸಿದಪ್ಪೆಂ ನೀಮುಂ ನಿಮ್ಮ ಚೊಚ್ಚಲ ಮಗನಪ್ಪ ಸೂರ್ಯನೂನುವಂ ಸೂರ್ಯದಿನದಂದು ಕಂಡು ಕಾರ್ಯಸಿದ್ಧಿಯಂ ಮಾಡಿ ಬನ್ನಿಂ" ಎಂದು ಹೇಳಿ ರಥಮನೇಱಿ, ಕರ್ಣನ ಮನೆಯ ಮುಂದನೆ ಬಂದು, ಮೇಲೆ ಬಿದ್ದಮ್ಮಂ ಕಿಱಿದಂತರಂ ಕಳಿಪಿ ಮಗುಳ್ವೆ, ಬಾ, ಪೋಪಂ, ಎಂದು ತನ್ನೊಡನೆ ರಥಮನೇಱಿಸಿ ಮುಂದೊಂದೆಡೆಯೊಳ್ ನಿಂದು

> ಭೇದಿಸಲೆಂದೆ ದಲ್ ನುಡಿದನೆನ್ನದಿರ್; ಒಯ್ಯನೆ ಕೇಳ ಕರ್ಣ, ನಿ
> ನ್ನಾದಿಯೊಳಬ್ಬೆ ಕೊಂತಿ, ನಿನಗಮ್ಮನಹರ್ಪತಿ, ಪಾಂಡುನಂದನರ್
> ಸೋದರರೆಯ್ದೆ ಮೆಯ್ದುನನೆ ನಾಂ, ಪೆಱತೇಂ ಪಡೆಮಾತೊ ನಿನ್ನದೀ
> ಮೇದಿನಿ, ಪಟ್ಟಮುಂ ನಿನತೆ, ನೀನಿರೆ ಮತ್ತೆ ಪೆಱರ್ ನರೇಂದ್ರರೇ? ||

ನಿನ್ನುತ್ಪತ್ತಿಯನಿಂತೆಂ
ದೆನ್ನರುಮಣಮಱಿಯರ್ ಅಱಿವೆನಾಂ ಸಹದೇವಂ
ಪನ್ನಗಕೇತು, ದಿನೇಶಂ
ನಿನ್ನಂಬಿಕೆ ಕುಂತಿಯಿಂತಿವರ್ ನೆಱೆ ಬಲ್ಲರ್ ||

ಎಂದು ಕರ್ಣನಿಗೆ ಮನಸೋಲುವಂತೆ ಅಭೂತಪೂರ್ವವಾದ ವಿಶ್ವಾಸಗೌರವಗಳನ್ನು ತೋರಿಸಿ, ಅವನ ಮನದೊಲವನ್ನು ಬೇರೆ ಕಡೆಗೆ ಹರಿಸಲು ಯತ್ನಿಸಿದನು. ಆದರೇನು? ಕರ್ಣನ ಸ್ವಾಮಿನಿಷ್ಠೆಯು ಎಡೆಸಿಕ್ಕಿದ ಕಡೆ ನಡೆದು, ಎಲ್ಲೋ ಸ್ವಲ್ಪಕಾಲ ಹರಿದು ಬತ್ತಿಹೋಗುವ ಕಿರುದೊರೆಯಲ್ಲ; ಅಡ್ಡಬಂದುದನ್ನೆಲ್ಲ ಪಕ್ಕಕ್ಕೆ ತಳ್ಳಿ ಬಗ್ಗದೆ ತನ್ನ ಹಾದಿಯಲ್ಲೇ ಹರಿವ ಪೆರ್ದೊರೆಯದು.

ಕೃಷ್ಣನ ಮಾತನ್ನು ಕೇಳಿ ಕರ್ಣನಿಗೆ ಕಣ್ಣೀರುಕ್ಕಿತು. ರೋಮಾಂಚವೆದ್ದಿತು. "... ನೀವೆನಗಿದನೇಕೆ ಪೇಟ್ದಿರೊ? ನೆಗಟ್ತೆವೊಗಟ್ತೆಯನಾಂಪಿನಂ ಸುಯೋಧನ ನೆನಗೊಳ್ಳಿಕೆಯ್ದ ಕೃತಮಂ ಪೞಗಿಕ್ಕಿ, ನೆಗಟ್ತೆ ಮಾಸೆ, ನಣ್ಪಿನ ನೆವದಿಂದೆ ಪಾಂಡವರ ನಾನೊಳವೊಕ್ಕೊಡೆ ನೀಮೆ ಪೇಸಿರೆ?"

.... ಭೂಪೋತ್ತಮನಂ ಬಿಸುಟ್ಟಿರದೆ ನಿಮ್ಮೊಳೆ ಪೊಕ್ಕೊಡೆ ಬೇಡನಲ್ಲೆನೇ?" ಎಂದು ಮರುಮಾತಿಗೆಡೆಯಿಲ್ಲದಂತೆ ಉತ್ತರ ಕೊಟ್ಟನು. ಬಳಿಕ "ಕರ್ಣಂ ತನಗೆಂತು ಮೊಡಂಬಡದುದಂ ನಿರ್ಣಯಮಾಗಱಿದು, ಮಗುಟಲ್ವೇೞ್ದು ನಾರಾಯಣಂ ಪೋದಂ"

ಇನ್ನು ಕುಂತಿಯ ಸರದಿ. ಕೃಷ್ಣನೆಂದಂತೆ ಅವಳು ಭಾನುವಾರದ ದಿನ ಗಂಗಾ ನದಿಗೆ ಹೋದಳು. ಆ ವೇಳೆಗೆ ಕರ್ಣನು ದುರ್ಯೋಧನನಟ್ಟಿದ ದೇವಸವಳದ ಪದಿನೆಂಟು ಕೋಟಿ ಪೊನ್ನುಮನೊಟ್ಟಿ, ಚಾಗಂಗೆಯ್ದು, ಜಗನ್ಮಂಗಳಗಂಗಾ ವಾರಿಯೊಳ್ ಅಘಮರ್ಷಣಪೂರ್ವಕಂ ಮಿಂದು, ಕನಕಪಾತ್ರದೊಳ್ ತೆಕ್ಕನೆ ತೀವಿದ ಕನಕ ಕಮಳಂಗಳಿಂದಾದಿತ್ಯಂಗೆ ಅರ್ಘ್ಯಮೆತ್ತಿ, ಸೂರ್ಯಮಂತ್ರಂಗಳ ನೋದಿ, ನೀರಂ ಸೂಸಿ, ತ್ರಿಃಪ್ರದಕ್ಷಿಣಂಗೆಯ್ಯುತ್ತಿರುವನು. ಕುಂತಿ ಬಂದ ಕೂಡಲೆ ಅವಳಿಗೆ ಸಾಷ್ಟಾಂಗವೆಱಗಿ ಪೊಡಮಟ್ಟನು. ಮಾತುಕತೆಗಳಾದ ಬಳಿಕ "ತಡೆಮಾಡದೆ ಅಪ್ಪಣೆಕೊಡಿ ನಾನಾವ ಸೇವೆಯನ್ನು ಮಾಡಲಿ!" "ನೀಮೆನಗೆಡೆಮಡಗದೆ ಬೆಸಪ ತೊಟ್ಟುಬೆಸಸಂ ಬೆಸಸಿಂ" ಎನ್ನಲು ಕುಂತಿಯು

ಎಂಬುದುಮಂಬಿಕೆ ಮಗನೆ ಮ
ನಂಬೆಳಱಿದೆ ನೀನುಮಿತ್ತೆಯಾನುಂ ಪೆತ್ತೆಂ
ನಂಬಿದ ನಿನ್ನನುಜರ್ ನಿ
ನ್ನಂ ಬೆಸಕೆಯೆ ನೀನೆ ನೆಲನನಾಳ್ವುದು ಕಂದಾ ||

ನಿನಗಪ್ಪರಸಂ ದುರ್ಯೋ
ಧನನೊಲವಂ, ಮುಂದುಗೆಯ್ದು ಬೆಸಕೆಯ್ವರೆ ನಿ
ನ್ನನುಜರೆರಡ್ದೆಸೆಗಂ ಕಿಸು
ಱಿನಿಸಾಗದು ಮಗನೆ, ನೀನೊಡಂಬಡವೇಳ್ಕುಂ ||

ಎಂದು ಹೇಳಿದಳು. ಅವಳ ಮಾತಿನ ಅಭಿಪ್ರಾಯವಿದು.—

ಕರ್ಣಾ, ನಾನು ಬಂದ ಕೂಡಲೆ ಮನಸ್ಸಿನಲ್ಲಿ ಕಳಂಕವೇನೂ ಇಟ್ಟುಕೊಳ್ಳದೆ ನನ್ನ ಇಷ್ಟವನ್ನು ನೆರವೇರಿಸುವುದಾಗಿ ಮಾತುಕೊಟ್ಟೆ. ಮಗನೇ, ನೀನು ಶತ್ರುಪಕ್ಷದಲ್ಲಿರುವವರೆಗೂ ಪಾಂಡವರಿಗೆ ಗೆಲವಿಲ್ಲ. ಅವರು ಉಳಿಯುವುದೂ ಇಲ್ಲ. ಆ ಪಕ್ಷವನ್ನು ಬಿಡು. ನಮ್ಮ ಕಡೆಗೆ ಬಾ; ಪುತ್ರದಾನ ಮಾಡು. ನಿನ್ನ ತಮ್ಮಂದಿರಾದ ಪಾಂಡವರೂ ನಿನ್ನನ್ನೇ ಪ್ರಾಣದಾತನೆಂದು ನಂಬಿ, ನಿನ್ನ ಅಡಿಯಾಳಾಗಿ ನಿಲ್ಲುವರು. ನೀನೇ ರಾಜ್ಯವನ್ನಾಳು. ಹೇಗೂ ನೀನೇ ರಾಜ. ಏಕೆಂದರೆ ನೀನು ದುರ್ಯೋಧನನ ಪಕ್ಷವನ್ನು ಬಿಟ್ಟರೆ ಅವನ ಬಲದೋಳು ಮುರಿದಂತೆಯೇ ಸರಿ. ಅವನಿಗೆ ಗೆಲವು ಸಿಗದು. ಪಾಂಡವರು ಗೆಲ್ಲುವರು. ನೀನು ಹಿರಿಯವನಾದುದರಿಂದ ರಾಜ್ಯಭಾರವು ನಿನಗೆ ಬಂದೇ ಬರಬೇಕು. ಅಥವಾ ಆಪ್ತಮಿತ್ರನೆನಿಸಿ ಇಬ್ಬರಿಗೂ ಹಿರಿಯವನಾದ ನೀನು ಪಾಂಡವರೆಲ್ಲರ ಒಪ್ಪಿಗೆಯಿಂದ ರಾಜನಾಗುವುದಾದರೆ ದುರ್ಯೋಧನನಿಗೂ ಅದು ಸಮ್ಮತವೇ ಆಗಬಹುದು. ಆಗ ಅವನು ಯುದ್ಧದ ಪ್ರಯತ್ನವನ್ನೇ ನಿಲ್ಲಿಸಬಹುದು. ಅಂತೂ ಹೇಗೂ ಅಖಂಡಭೂಮಂಡಲಾಧಿಪತ್ಯವು ಸಿದ್ಧವಾಗಿರುವಾಗ ಕೇವಲ ಅಂಗದೇಶಾಧಿಕಾರಕ್ಕೋಸ್ಕರ ದುರ್ಯೋಧನನ ಸೇವೆ ಮಾಡುತ್ತಿರಬಹುದೆ? ಉಭಯಪಕ್ಷದವರೂ ನಿನ್ನ ತಮ್ಮಂದಿರು. ನಾನು ಹೇಳಿದಂತೆ ನಡೆದರೆ ಇಬ್ಬರಿಗೂ ಕಷ್ಟವಿಲ್ಲ; ಅಸಮಾಧಾನವಿಲ್ಲ. ಒಡಂಬಡು, ಕರ್ಣಾ!

ನೋಡಿದರೆ, ಕುಂತಿಯ ಮಾತಿನಲ್ಲಿ ತಪ್ಪೇನೂ ಕಾಣುವುದಿಲ್ಲ. ಬೇಡುವವಳು ತಾಯಿ, ಬೇಡುವುದು ತಮ್ಮಂದಿರ ಹಿತವನ್ನು, ಅದರಿಂದ ಅವನಿಗೂ ನಷ್ಟವಿಲ್ಲ. ಚಕ್ರಾಧಿಪತ್ಯದ ಲಾಭ! ಆದರೂ ಕರ್ಣನಿಗದು ಸರಿಹೋಗಲಿಲ್ಲ. ಅವನು ಎಲ್ಲವನ್ನೂ ಕೇಳಿ ಮುಗುಳ್ನಗೆ ನಕ್ಕು ಉತ್ತರಕೊಟ್ಟನು.—

ಭಯಮುಂ ಲೋಭಮುಮೆಂಬ ತಮ್ಮುತೆರಡುಂ ಪಾಪಕ್ಕೆ ಪಕ್ಕಾಗೆ, ಪಾ
ಟಿಯನೊಕ್ಕಾಳ್ದನ ಗೆಯ್ದು ಸತ್ಕೃತಮುಮಂ ಪಿಂತಿಕ್ಕಿ, ಜೋಳಕ್ಕೆ ತ
ಪ್ಪಿಯುಮಿಂ ಬಾಳ್ವುದೆ, ಪೂಣ್ದು ನಿಲ್ಲದಿಕೆಯಿಂ ಬಾಳ್ವಂತು ವಿಖ್ಯಾತಕೀ
ರ್ತಿಯವೋಲೀಯೊಡಲಬ್ಬೆ ಪೇಟಿಮೆನಗೇಂ ಕಲ್ಪಾಂತರಸ್ಥಾಯಿಯೇ ||

ಮಾಂಗುಲಿಗನೆನಾಗಿಯುಮಣ
ಮಾಂ ಗುಣಮನೆ ಬಿಸುಟೆನಿಲ್ಲ ನಿಮಗಂ ಮಗನಾ

ದಂಗೆನಗೆ ಬಿಸುಡಲಕ್ಕುಮೆ
ನೀಂ ಗಳ ಪಂಬಲನೆ ಬಿಸುಡಿವಿನ್ನೆನ್ನೆಡೆಯೊಳ್ ||

ಅವನ ಭಾವವಿದು :—"ಅಮ್ಮಾ, ನಿನ್ನಿಷ್ಟದಂತೆ ನಡೆಯಬೇಕಾದರೆ ಇದು ವರೆಗೆ ಲೋಕದಲ್ಲಿ ತಪ್ಪದೆ ನಡೆದುಕೊಂಡು ಬಂದಿರುವ ಧರ್ಮಮಾರ್ಗವನ್ನು ಮೀರ ಬೇಕು. ದಿಕ್ಕಿಲ್ಲದೆ ಕಂಡ ಕಂಡೆಡೆಯಲ್ಲೆಲ್ಲ ನಿಂದೆಗೆ ಗುರಿಯಾಗಿ ಕುಲಹೀನನೆನಿಸಿ ಕೊಂಡಿದ್ದ ನನ್ನನ್ನು ಹಿಡಿದೆತ್ತಿ, ಪದವಿಯನ್ನಿತ್ತು, ಗಣ್ಯರಲ್ಲೊಬ್ಬನೆನಿಸಿ ರಾಜ ನೆಂದೆನಿಸಿದ ದುರ್ಯೋಧನನಿಗೆ ಕೃತಘ್ನನಾಗಬೇಕು ; ಸಮಯಕ್ಕೆ ಒದಗುತ್ತಾನೆಂದು ನಂಬಿ, ಅಶನವಸನಗಳನ್ನು ಕೊಟ್ಟು ಕಾಪಾಡಿದ ಒಡೆಯನನ್ನು ಒಳ್ಳೆಯ ಸಮಯ ದಲ್ಲಿ ಕೈಬಿಟ್ಟು ಉಪ್ಪುಂಡ ಮನೆಗೆ ಎರಡು ಬಗೆಯಬೇಕು. ಸರಿ! ಒಂದುವೇಳೆ ಈ ಪಾಪಗಳನ್ನೂ ಮಾಡಿದೆನೆಂದುಕೋ. ಇದರಿಂದ ಬರುವ ಫಲ ? ನಿನ್ನ ಮನೋರಥ ಪೂರ್ತಿಯಲ್ಲವೇ ? ಅದೇನು ? ಪಾಂಡವರು ಸಾಯುವರಲ್ಲಾ ಎಂಬ ಭಯ, ಅವರು ಬದುಕಿ ರಾಜ್ಯವನ್ನಾಳಲಿ ಎಂಬ ಆಸೆ, ಇವೆರಡು ತಾನೆ! ನೋಡೋಣ! ಕ್ಷತ್ರಿಯ ವೀರನು ಯುದ್ಧದಲ್ಲಿ ಸಾಯುವನಲ್ಲಾ ಎಂದು ವೀರಮಾತೆಯೆನಿಸಿದ ನೀನು ಭಯ ಪಡಬಹುದೇ ? ಸತ್ತರೆ ನಷ್ಟವೇನು ? ಗೆದ್ದರೆ ಭೂಮಿಯ ಒಂದೆಡೆಯ ಒಡೆತನ; ಸತ್ತರೆ ಅಖಂಡ ವೀರಸ್ವರ್ಗ. ಹೀಗಿರಲು ಪಾಂಡವರು ಬದುಕಿ ಈ ರಾಜ್ಯವನ್ನೇ ಆಳಬೇಕೆಂದು ಬಯಸುವುದು ಏಕೆ ? ಹೀಗೆ ನಿನ್ನ ಬಯಕೆಯ ಎರಡು ಪಾಪಗಳನ್ನೂ ಪೂರ್ಣಮಾಡಲು ನಾನೂ ನೆರವಾಗಬೇಕಲ್ಲವೇ ? ಸರಿ! ಹಾಗೂ ಆಗಲಿ. ಅದರಿಂದ ನನಗಾಗುವ ಪ್ರಯೋಜನವೇನೆಂದು ನೋಡೋಣ. ಈಗಿರುವಂತೆಯೇ ಇದ್ದರೆ 'ಕರ್ಣನು ದುರ್ಯೋಧನನಿಗೆ ಅಚ್ಚುಮೆಚ್ಚಿನ ಬಂಟನೆನಿಸಿ ಯಾರು ಯಾರು ಎಷ್ಟೆಷ್ಟು ಆಸೆ ಲೋಭಗಳನ್ನು ತೋರಿದರೂ ಅವನನ್ನು ಬಿಟ್ಟುಹೋಗದೆ ಕೊನೆಗೆ ಅವನಿಗಾಗಿ ದೇಹವಿತ್ತನು' ಎಂಬ ಕೀರ್ತಿಯು ಎಷ್ಟು ಕಾಲವಾದರೂ ಅಚ್ಚಳಿಯದೆ ಸ್ಥಿರವಾಗಿರುವುದು. ನಿನ್ನ ಮಾತಿನಂತೆ ನಡೆದರೋ ? ನೀನು ಹೇಳುವಂತೆ ರಾಜ್ಯವು ಸಿಗಬಹುದು. ನಿಜ! ಅದರಿಂದ ಸುಖವೂ ಬರಬಹುದು. ಆದರೆ ಆ ಸುಖವೂ ಅದನ್ನನು ಭವಿಸುವ ನನ್ನ ಈ ದೇಹವೂ ಎಷ್ಟು ದಿವಸವಿದ್ದೀತಮ್ಮಾ ! ನಶ್ವರವಾದುದಲ್ಲವೆ ?

ಇದುವರೆಗೂ ನಾನು ಮಿಾಂಗುಲಿಗನ ಮಗನೆಂದು ತಿಳಿದಿದ್ದೆನು. ಹೀನಕುಲ ದವನಾದ್ದರಿಂದ ಹೇಗಿದ್ದರೂ ಬಾಧಕವಿರಲಿಲ್ಲ. ಆಗಲೂ ಸಹ ನಾನು ಸ್ವಾಮಿನಿಷ್ಠೆ, ಸತ್ಯ ಮುಂತಾದ ಸದ್ಗುಣಗಳನ್ನು ಬಿಟ್ಟಿರಲಿಲ್ಲ. ಈಗ ನಾನು ಸೂರ್ಯದೇವನ ಅನುಗ್ರಹದಿಂದ, ಕ್ಷತ್ರಿಯ ವೀರಳೆನಿಸಿದ ನಿಮ್ಮ ಹೊಟ್ಟೆಯಲ್ಲಿ ಹುಟ್ಟಿದವನೆಂದು ತಿಳಿದೆನು. ಇಂತಹ ಉತ್ತಮ ಕುಲದಲ್ಲಿ ಹುಟ್ಟಿದವನಾದ ಮೇಲೆ ಶೀಲವನ್ನು ತೊರೆದು

ದುರ್ಗುಣಿಯಾಗಬಹುದೇ ? ಅಮ್ಮಾ, ನೀವು ನನ್ನ ಆಸೆಯನ್ನು ಬಿಡಿ. ನನ್ನೊಡನೆ ಇನ್ನು ಈ ವಿಷಯವನ್ನೆತ್ತಬೇಡಿ.'' ಹೀಗೆಂದು ಕಡು ಖಂಡಿತವಾಗಿ ನಿರ್ದಾಕ್ಷಿಣ್ಯ ವಾಗಿ ಹೇಳಿಬಿಟ್ಟನು. ಇದಕ್ಕಿಂತಲೂ ಹೆಚ್ಚಿನ ಸ್ವಾಮಿಭಕ್ತಿಯುಂಟೆ ?

ಈ ತೆರದ ಕಡುನೇಮದ ಸ್ವಾಮಿಭಕ್ತಿ ಕರ್ಣನದು. ಅನವರತವೂ ಅವನಿಗೆ ಅದೇ ಚಿಂತೆ. "ಕುರುಪತಿಗಿಲ್ಲ ದೈವಬಲಂ ; ಆಜಿಗೆ ಮೇಲ್ಮಲೆಗೆಯ್ವರಾಗಳುಂ ಗುರು ಗುರುಪುತ್ರಸಿಂಧುಸುತರ್. ಆಳ್ದನುಮೆನ್ನನೆ ನಚ್ಚಿ ಪೆರ್ಚಿ ಮುಂ ಪೊರೆದಂ'' ಎಂದು ಚಿಂತಾಕ್ರಾಂತನಾಗುತ್ತಿದ್ದನು. ತನ್ನೊಡೆಯನನ್ನು ಸೇವಿಸುವ ಉತ್ಸಾಹದಲ್ಲಿ ಗುರುಹಿರಿಯರೆಂದು ನೋಡದೆ ಕೆಲವುವೇಳೆ ತನ್ನ ಯೋಗ್ಯತೆ ಮೀರಿ ಮಾತನಾಡಿ ಬಿಡುತ್ತಿದ್ದನು. ಇದಕ್ಕಾಗಿ ಎಲ್ಲರಿಗೂ ಅವನ ಮೇಲೆ ಅಸಮಾಧಾನ.

ಇರ್ಕಡೆಯವರೂ ಯುದ್ಧಕ್ಕೆ ಸಿದ್ಧರಾಗಿದ್ದಾರೆ. ದುರ್ಯೋಧನನು ಭೀಷ್ಮಾ ಚಾರ್ಯರಿಗೆ ವೀರಪಟ್ಟವನ್ನು ಕಟ್ಟಿದ್ದಾನೆ. ಕರ್ಣನು ಆಗ ಸುಮ್ಮನಿರದೆ

ಭಗವತಿಯೇಱುವೇಟ್ವ ತೆರದಿಂ ಕಥೆಯಾಯ್ತವಱೇಱು ನೀನಿದಂ
ಬಗೆದಿವರಿನ್ನುಮಾಂತಿಱಿವರೆಂದು ವಿಮೋಹಿಸಿ ವೀರಪಟ್ಟಮಂ
ಬಗೆಯದೆ ಕಟ್ಟಿದೈ, ಗುರುಗಳಂ ಕುಲವೃದ್ಧರನಾಜಿಗೊಯ್ದು ಕೆ
ಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ ||

ಕಟ್ಟಿದ ಪಟ್ಟಮೆ ನರವಿಗೆ
ನೆಟ್ಟನೆ ದೊರೆ, ಪಿಡಿದ ಬಿಲ್ಲೆ ದಂಟಿಂಗೆಣೆ ಕ
ಣ್ಗೆಟ್ಟ ಮುದುಪಂಗೆ ಪಗೆವರ
ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂಗಟ್ಟಾ ||

ಆದಿಯೊಳವರಂ ಪಿರಿದೊಂ
ದಾದರದಿಂ ನಡಪಿದಜ್ಜರಪ್ಪುದಱಿಂದಂ
ಕಾದರಿವರವರೊಳವರುಂ
ಕಾದರ್ ನೆರೆದಿವರೊಳೆಂತು ನಂಬುವೆ ನೃಪತೀ ||

ಎಂದು ಎಲ್ಲರೆದುರಿಗೂ ಭೀಷ್ಮಾಚಾರ್ಯರನ್ನು ಜರೆದುಬಿಟ್ಟನು. ಅದನ್ನು ಕೇಳಿ ದ್ರೋಣಾಚಾರ್ಯರು ತಡೆಯದೆ ಕೋಪದಿಂದುರಿದು

ಸಿಂಗದ ಮುಪ್ಪುಂ ನೆಗೆಟ್ಟೀ
ಗಾಂಗೇಯರ ಮುಪ್ಪು ಮಿಟಿಕೆವಡೆಗುಮೆ ? ವನಮಾ
ತಂಗಂಗಳಿನಸುಹೃಚ್ಚತು
ರಂಗಬಲಂಗಳಿನದೆಂತುಮುಂಗಾಧಿಪತೀ ? ||

ಕುಲಜರನುದ್ಧತರಂ, ಭುಜ
ಬಲಯುತರಂ, ಹಿತರನೀ ಸಭಾಮಧ್ಯದೊಳ
ಗ್ಗಲಿಸಿದ ಮದದಿಂ ನಾಲಗೆ
ಕುಲಮಂ ತುಬ್ಬುವವೊಲುಱದೆ ನೀಂ ಕೆಡೆನುಡಿವೈ ||

ಎಂದು ನಿಂದಿಸಿದರು. ಕರ್ಣನು ಅಲ್ಲಿಗೂ ಸುಮ್ಮನಾಗಲಿಲ್ಲ. ಅದಕ್ಕೂ ಮತ್ತೊಂದು ವಾಗ್ಬಾಣವನ್ನೇ ಬಿಟ್ಟನು.—

ಕುಲಮನೆ ಮುನ್ನಮುಗ್ಗಡಿಪಿರೇಂ ಗಳ! ನಿಮ್ಮ ಕುಲಂಗಳಾಂತು ಮಾ
ರ್ಮಲೆವನನಟ್ಟಿತಿಂಬುವೆ? ಕುಲಂ ಕುಲಮಲ್ತು ; ಚಲಂ ಕುಲಂ, ಗುಣಂ
ಕುಲಮಭಿಮಾನಮೊಂದೆ ಕುಲಮಣ್ಮು ಕುಲಂ ಬಗೆವಾಗಳೀ
ಕಲಹದೊಳಣ್ಣ ನಿಮ್ಮ ಕುಲವಾಕುಲವಂ ನಿಮಗುಂಟುಮಾಡುಗುಂ ||

ಇಷ್ಟು ಹೇಳಿಬಿಟ್ಟು ಸುಮ್ಮನಾದರೂ ಆದನೆ? ಪ್ರತಿಜ್ಞೆಯೊಂದನ್ನು ಮಾಡಿಬಿಟ್ಟನು.

ಗಂಗಾಸುತಂ ಪೃಥಾಸುತ
ರಂ ಗೆಲ್ದೊಡೆ ತಪಕೆ ಪೋಪೆನವರ್ಗಳ ಕೆಯ್ಯೊಳ್
ಗಾಂಗೇಯನಟಿದೊಡಹಿತರ
ನಾಂ ಗೆಲೆ ತಳ್ತಿಱಿವೆನನ್ನೆಗಂ ಬಿಲ್ವಿಡಿಯೆಂ ||

ಭೀಷ್ಮಾದಿಗಳು ಪಾಂಡವಪಕ್ಷಪಾತಿಗಳೇ ಹೊರತು ನಿಜವಾದ ಸ್ವಾಮಿಭಕ್ತರಲ್ಲವೆಂಬ ತನ್ನ ಅಭಿಪ್ರಾಯವನ್ನು ಸ್ಪಷ್ಟಪಡಿಸುವುದಕ್ಕಾಗಿ, ತನ್ನ ಉತ್ಕಟ ಪತಿಭಕ್ತಿಯ ಉತ್ಸಾಹದಲ್ಲಿ ಅಳತೆಯರಿಯದೆ ಮಾಡಿಬಿಟ್ಟ ಪ್ರತಿಜ್ಞೆಯಿದು.

ಇಂತಹುದೇ ಮತ್ತೊಂದು ಸಂದರ್ಭ. ದ್ರೋಣಾಚಾರ್ಯರು ಧರ್ಮರಾಜನ "ಹತೋಽಶ್ವತ್ಥಾಮಾ" ಎಂಬ ನುಡಿಯನ್ನು ಕೇಳಿ, ಶಸ್ತ್ರತ್ಯಾಗಮಾಡಿ, ಸ್ವರ್ಗಸ್ಥರಾಗಲು, ದುರ್ಯೋಧನನು ಪಿತೃಶೋಕದಿಂದ ದುಃಖಿಸುವ ಅಶ್ವತ್ಥಾಮನನ್ನು ಸಂತೈಸಲು ಹೋಗಿ

. . . . . . . . . . . . . . ದುರ್ಯುಕ್ತಿಯಿಂ
ದದಯಂ ಧರ್ಮಜನಿಕ್ಕಿದಂ ಗುರುವನಿಂ ನೀನಾತನಂ ಬೇಗಮಿ
ಕ್ಕದೆ ಕಣ್ಣೀರ್ಗಳನಿಕ್ಕೆ ಚಂದ್ರಧವಳಂ ನಿನ್ನನ್ವಯಂ ಮಾಸದೇ ||

ಎನಗೆ ಕೂರ್ಪುದನಾ ಘಟಸಂಭವಂ
ನಿನಗೆ ಕೂರನಟಿಲ್ ನಿನತಲ್ತು ಕೇ
ಳೆನಿತುಮಾಱದ ಶೋಕಮನಿರ್ವರುಂ
ಮುನಿವರಂ ತವೆ ಕೊಂದೊಡನೀಗುವಂ ||

ಎಂದು ಪ್ರೋತ್ಸಾಹಿಸಿ ದುಃಖದಿಂದ ಸಂದಿಹೋಗಿದ್ದ ಅವನ ಶೌರ್ಯವನ್ನು ಮತ್ತೆ ಹೊತ್ತಿಸಿದನು. ಅಶ್ವತ್ಥಾಮನಿಗೆ ಬಿಸುಪೇರಿತು. ಹಿಂದೆ ಪರಶುರಾಮನು ಮಾಡಿದಂತೆ ಈಗ ನಾನು ಪಾಂಡವರನ್ನು ನಿರ್ಮೂಲಮಾಡುವೆನು ಎಂದು ಪ್ರತಿಜ್ಞೆಮಾಡಿದನು.

ರಾಯೆಂಬೀ ಪೆಸರಿಲ್ಲದಂತು ಮುಟಿಸಿಂ ಮುಯ್ಯೇೞು ಸೂಡೆಂತು ಕ
ಟ್ಟಾಯಂ ಪೊಂಪುೞಿವೋಗೆ ತಂದೆಯಟಿಪಿಂಗಾ ಭಾರ್ಗವಂ ಕೊಂದನಿಂ
ತೀಯೆಮ್ಮಯ್ಯನಿನಾದುದೊಂದು ಪಗೆಯಿಂ ಸೀೞ್ದುಗ್ರಪಾಂಚಾಳರಾ
ಜಾಯುಃಪಾರಮನನ್ಯಭೂಪಬಲಮಂ ಪರ್ದಿಂಗೆ ಬಿರ್ದಿಕ್ಕುವೆಂ ||

ಕರ್ಣನು ಈ ಮಾತುಗಳೆಲ್ಲವನ್ನೂ ಕೇಳಿದನು. ಅವನಿಗೆ ಮೈಯುರಿದು ಹೋಯಿತು. "ಇದೆಂತಹ ಕುಚೇಷ್ಟೆ? ಯುದ್ಧ ಮಾಡುತ್ತಿರುವಾಗ ಧರ್ಮರಾಜನು ಏನೋ ಹೇಳಿದರೆ ದ್ರೋಣಾಚಾರ್ಯರೇಕೆ ಅಸ್ತ್ರವನ್ನು ತೊರೆಯಬೇಕು? ಸ್ವಾಮಿಕಾರ್ಯ ವನ್ನು ಮಾಡುವುದು ಹೀಗೇಯೋ? ಇದರಿಂದ ಶತ್ರುಗಳಿಗೆ ಅನುಕೂಲವಾಗಿ ತನ್ನ ಸ್ವಾಮಿಗೆ ಮೋಸಮಾಡಿ ತಾನೂ ಸತ್ತಂತಾಯಿತಲ್ಲದೆ ಮತ್ತೇನು ಪುರುಷಾರ್ಥ ವಾಯಿತು?" ಎಂಬ ಯೋಚನೆಗಳು ಒಂದರ ಹಿಂದೊಂದು ಬಂದು, ನಾಲಗೆಯನ್ನು ಬಿಗಿಹಿಡಿಯುವುದಕ್ಕಾಗದೆ

ಎನಿತಳವುಳ್ಳೊಡಂ ದ್ವಿಜನ ಗಂಡಗುಣಕ್ಕಗಿವನ್ನರಾರೊ ನೆ
ಟ್ಟನೆ ವಿಷಮೊಳ್ಳಿಗುಳ್ಳೊಡಮದೊಳ್ಳಿಯೆ ಕಾಳಿಯ ನಾಗನಾಗದ
ಣ್ಮಿನ ಪಡೆಮಾತದೊಂದೆ ನೆವಮಾಗಿರೆ ಕೆಯ್ದುವನಿಕ್ಕಿ ಸತ್ತ ಸಾ
ವಿನ ಪಡಿಚೆಂದಮಾಗಿಯುಮಿದೇಂ ನಿಮಗಟ್ಟಿಯೊ ಗಂಡವಾತುಗಳ್ ||

ಎಂದು ಹೇಳಿ ಸ್ವಾಮಿದ್ರೋಹವನ್ನು ಸಹಿಸದ ತನ್ನ ಹೊಟ್ಟೆಯುರಿಯನ್ನು ತೀರಿಸಿ ಕೊಂಡನು.

ಕರ್ಣನ ಈ ಉದ್ಧತವಾಕ್ಯವನ್ನು ಕೇಳಿ ಅಶ್ವತ್ಥಾಮನಿಗೆ ತಡೆಯಲಾರದಷ್ಟು ಕೋಪವು ಬಂತು.

. . . . . . . . . . . ಈ ಖಳನಿಲ್ಲಿ ಧನಂಜಯ
ಕ್ರೂರ ಬಾಣಗಣಾವಳಿಯಿಂದಟೀಕ್ಕಾಡಿದೊಡಲ್ಲದೆ ವೈರಿಸಂ
ಹಾರ ಕಾರಣ ಚಾಪಮನಾನೀಸಂಗರದೊಳ್ ಪಿಡಿಯೆಂ ಗಡಾ ||

ಎಂದು ಪ್ರತಿಜ್ಞೆಮಾಡಿ ಶಸ್ತ್ರತ್ಯಾಗ ಮಾಡಿಬಿಟ್ಟನು.

ಕರ್ಣನು ಆಗಲಾದರೂ ಸುಮ್ಮನಿರದೆ "ಮುಳಿಸುವೆರಸಿದ ಮುಗುಳ್ನಗೆಯಿಂದ" ಹೇಳಿದನು.—

> ಭುವನಂಗಳ್ ಪದಿನಾಲ್ಕುಮಂ ನಡುಗಿಸಲ್ ಸಾಮರ್ಥ್ಯಮುಳ್ಳೆನ್ನ ಕೆ
> ಯ್ದು ವಿನೊಳ್ ತೀರದುದಾವ ಕೆಯ್ದು ವಿನೊಳಂ ತೀರ್ದಪ್ಪುದೇ ? ನಿನ್ನ ಕೆ
> ಯ್ದು ವನೆಂತುಂ ಬಿಸುಟಿರ್ದ ಲೆಕ್ಕಮೆ ವಲಂ, ನಿಷ್ಕಾರಣಂ ಕೆಯ್ದು ವಿ
> ಕ್ಕುವ ಕಣ್ಣೀರ್ಗಳನಿಕ್ಕುವೀಯೆರಡುಮಂ ನಿಮ್ಮಯ್ಯನೊಳ್ ಕಲ್ತಿರೇ ? ||

ಎಂತಹ ಮನವಿರಿಯುವ ಮಾತಿದು ? ಅಶ್ವತ್ಥಾಮನ ಮೇಲೆ ಕೋಪ ಬಂದರೆ ಪಾಪ ! ಸ್ವರ್ಗವಾಸಿಗಳಾದ ದ್ರೋಣಾಚಾರ್ಯರನ್ನೇಕೆ ನಿಂದೆಗೆಳೆಯಬೇಕು ?

ನೃಪವಾತ್ಸಲ್ಯಮದದಿಂದ ಕರ್ಣನು ಹೀಗೆನ್ನುತ್ತಾನೆಂದು ಅಶ್ವತ್ಥಾಮನು ತಿಳಿದು

> ಮುನಿಸಂ ಮುಂದಿಟ್ಟು ಬಿಲ್ಲಂ ಬಿಸುಡಲೆ ಬಗೆದೆಂ ಮುನ್ನವಿನ್ನುಕ್ಕಿನಿಂ ನಿ
> ನ್ನನೆ ಪೀನಂ ನಚ್ಚಿ ನಿನ್ನಾಳ್ದನ ನುಡಿಯಿಸೆ ನೀನಾಡಿದ್ದೆ ಮಾತನಾದ
> ಲ್ಕೆನಗೀ ಸೂಟಿಲ್ತು ; ಸೇನಾಧಿಪಪದವಿಯೊಳಿಂ ನೀನೆ ನಿಲ್, ನಾಳೆ ದುರ್ಯೋ
> ಧನನಂ ಸಕ್ಕಿಟ್ಟು ಮಾಱಾಂತದಟರೊಳಳವಂ ತೋಱುವಂ ನೀನುಮಾನುಂ ||

ಎಂದು ಹೇಳಿ ಹೊರಟು ಹೋಗಿಬಿಟ್ಟನು. ಹೀಗೆ ಕರ್ಣನ ನಾಲಗೆಯ ದೋಷದಿಂದ ಕೌರವ ಪಕ್ಷದಲ್ಲಿ ಅಂತಃಕಲಹಗಳು ಆಗಾಗ ನಡೆಯುತ್ತಿದ್ದುವು.

## ಕರ್ಣನ ಸೌಜನ್ಯ

ಮೇಲಿನ ಸಂದರ್ಭಗಳನ್ನು ನೋಡಿದರೆ ಕರ್ಣನು ಉದ್ಧತನೆಂದೂ ಅವನಲ್ಲಿ ಸೌಜನ್ಯವು ಕಡಮೆಯೆಂದೂ ತೋರಬಹುದು. ಆದರೆ ವಸ್ತುತಃ ಹಾಗಲ್ಲ ; ಅವನು ಸಹಜವಾಗಿ ವಿನಯಶೀಲನು, ನಯವಂತ, ಮರ್ಯಾದೆಯನ್ನು ಎಂದೂ ಮೀರುವವನಲ್ಲ. ಪತಿಭಕ್ತಿಯ ಪಂಪಿನಿಂದಲೂ, ತನ್ನ ಶೌರ್ಯದ ನಂಬಿಕೆಯಿಂದಲೂ ಹೇಳಿದ ಮಾತುಗಳವು.

ಹಿಂದೆ ಹೇಳಿದಂತೆ ಭೀಷ್ಮಾಚಾರ್ಯರನ್ನೂ ದ್ರೋಣಾಚಾರ್ಯರನ್ನೂ "ಕಣ್ಗೆಟ್ಟ ಮುದುಪಂ" ಇತ್ಯಾದಿಯಾಗಿ ಮನಬಂದಂತೆ ದೂಷಿಸಿದ ಬಳಿಕ ಅವನಿಗೆ ಬಹಳ ಪಶ್ಚಾತ್ತಾಪವಾಗಿರಬೇಕು. ಬಳಿಕ ಭೀಷ್ಮರು ಶಿಖಂಡಿಯನ್ನೆದುರಿಸದೆ ಶಸ್ತ್ರವನ್ನು "ಜಿದಿರ ಸಿಡಿಂಬಿನ ಪೊದಱೊಳಗೆ ಮಱಿದೊಱಗಿದ ಮೃಗರಾಜನಂತೆ ಶರಶಯನದೊಳೊ"ರಗಲು, ದುರ್ಯೋಧನನು ಪಾಂಡವರನ್ನು ಗೆಲ್ಲುವ ಬಗೆ ಹೇಗೆಯೆಂದು ಚಿಂತಿಸಿ,

> ಆನ್ತೀ ಸಾಧಿಸಿಕೊಂಡು ಪಾಂಡುಸುತರಂ ನಣ್ಪಿಂಗೆ ಬೆನ್ನಿತ್ತುದಲ್
> ಸಯ್ತಾಯ್ತು ಜ್ಜನ ಮಾತು ! ನಮ್ಮ ಪಡೆಯಂ ಕಾವನ್ನರಿನ್ನಾರೊ ಸು
> ಷ್ಠ ಯ್ತಂ ಕಾಪೊಡೆ ಕರ್ಣನಕ್ಕುಮದಱಿಂ ನಾಮೆಲ್ಲಮಾತಂಗೆ ನಿ
> ರ್ವ್ಯಯ್ತಂ ಬೀರದ ಬೀರವಟ್ಟಮನಿದಂ ನಿರ್ವ್ಯಾಜದಿಂ ಕಟ್ಟುವಂ ||

ಎಂದು ಭೀಷ್ಮಾಚಾರ್ಯರಲ್ಲಿ ಅಸ್ವರಸಬುದ್ಧಿಯನ್ನು ಪ್ರಕಟಿಸಿ, ಕರ್ಣನಲ್ಲಿ ತನ್ನ ವಿಶ್ವಾಸವನ್ನು ಪ್ರಕಟಿಸಿದನು. ಹಿಂದೆ . . . 'ಪಗೆವರ ನಿಟ್ಟೆಲ್ವಂ ಮುಱಿವೊಡೆನಗೆ ಪಟ್ಟಂ ಗಟ್ಟಾ' ಎಂದು ತಾನಾಗಿಯೇ ಹೇಳಿದ್ದ ಕರ್ಣನು ಈಗ ಹೇಳುವುದನ್ನು ನೋಡಿ:—

ಸುರಸಿಂಧೂದ್ಭವನಿಂ ಬೞಿಕ್ಕೆ ಪೆಱರಾರ್ ಸೇನಾಧಿಪತ್ಯಕ್ಕೆ ತ
ಕ್ಕರೆ ಲೋಕೈಕಧನುರ್ಧರಂ ಕಳಶಜಂ ತಕ್ಕಂ ನದೀನಂದನಂ
ಗೆ ರಣಕ್ಕಾಂ ನೆರಮಾದೆನಪ್ಪೊಡಿಸಿತೇಕಾದಪ್ಪುದೀ ಪೊದ್ದೆ ಪೊ
ಟ್ಟೆರವೇಡೀವುದು ಬೀರವಟ್ಟಮನದಂ ದ್ರೋಣಂಗೆ ನೀಂ ಭೂಪತೀ ||

ಇದೆಂತಹ ವಿನಯಗುಣ!

ದ್ರೋಣಾಚಾರ್ಯರ ಮರಣಾನಂತರ ಅವರಿಗಾಗಿ ದುಃಖಿಸುತ್ತಿದ್ದ ಅಶ್ವತ್ಥಾಮನನ್ನೂ, ಬ್ರಾಹ್ಮಣಜಾತಿಯನ್ನೂ, ವಿಶೇಷತಃ ದ್ರೋಣಾಚಾರ್ಯರನ್ನೂ ದೂರಿದನಷ್ಟೆ. ಅದೂ ಅವನ ಮನಸ್ಸನ್ನು ಇರಿದಿರಬಹುದು. ಆದರೆ ಮಾಡುವುದೇನು? ದ್ರೋಣಾಚಾರ್ಯರಿದ್ದಾರಿಯೆ ಕ್ಷಮಾಪಣೆಯನ್ನು ಕೇಳಿಕೊಳ್ಳುವುದಕ್ಕೆ? ಅಂತೂ ಈ ಅನೌಚಿತ್ಯಕ್ಕಾಗಿ ಪ್ರಾಯಶ್ಚಿತ್ತಮಾಡಿಕೊಳ್ಳಲೆಳಸಿ, ಸೇನಾಧಿಪತ್ಯವು ಬಂದ ದಿನ "ಒರ್ವನೆ ಶರಶಯನದೊಳಿರ್ದ ಗಾಂಗೇಯನಲ್ಲಿಗೆ ಬಂದು, ರಥದಿಂದಮಿೞಿದು, ಮೂಱು ಸೂಳ್ ಬಲವಂದು, ತದೀಯ ಪಾದಪದ್ಮಂಗಳಂ ತಲೆಯೊಳಿಟ್ಟುಕೊಂಡು

ಆಂ ಮಾತಱಿಯದೆ ಮುಳಿದುಂ
ನಿಮ್ಮಡಿಯಂ ನೋಯೆ ನುಡಿವೆನೞಿದೇಳಿಸಲೇ
ನೆಮ್ಮಳವೆ? ಮಱೆವುದಾ ಮನ
ದುಮ್ಮಚ್ಚರಮುಜ್ಜ ನಿಮ್ಮ ನೆರೆಯಲೆ ಬಂದೆಂ ||

ಧುರದೊಳ್ ನಿಮ್ಮಡಿಯುಂ ಗೆಲ
ಲರಿಯವುಮಾ ಪಾಂಡುಸುತರನೆಮ್ಮಂದಿಗರ
ಚ್ಚರಿಯಲ್ತೆ ಗೆಲ್ವರೆಂಬುದು
ಹರಿಗನೋಱಿದೆಂತುಮನ್ನ ಚಲಮುನೆ ಮೆಱೆವೆಂ ||

ಎಂದು ವಿನಯದಿಂದ ಬೇಡಿಕೊಂಡನು.

ಭೀಷ್ಮಾಚಾರ್ಯರಿಗೆ ಕರ್ಣನ ಸ್ವಭಾವವು ಬಲು ಚೆನ್ನಾಗಿ ಗೊತ್ತು. ಅವರು ಹೇಳಿದುದೇನೆಂದರೆ "ನುಡಿದುದಂ ಪತಿಭಕ್ತಿಯ ಪೆಂಪಿಂ ನೀಂ ನುಡಿದೈ ಪೆಱತಂದದಿಂ ನುಡಿದೆಯಲ್ತು . . . ಎಮಗೆಂದುದದೇಂ ತಪ್ಪಾದುದೇ? ನೀನೆಮಗೆ ಕುಂತಿಯ ಗಾಂಧಾರಿಯ ಮಕ್ಕಳ ಲೆಕ್ಕದೆ ಮಮ್ಮನೈ!

ನಿನ್ನನೆ ನಚ್ಚಿದಂ ಕುರುಮಹೀಪತಿ, ನಿನ್ನ ಶರಾಳಿಗಳ್ಗೆ ಮು
ನ್ನನ್ನಡುಗುತ್ತುಮಿರ್ಪುದರಿ ಸಾಧನಸಂಪದಮಂತೆ ಶಸ್ತ್ರಸಂ
ಪನ್ನನೆ ಆಗಿ, ಶಲ್ಯನನೆ ಸಾರಥಿಯಾಗಿರೆ ಮಾಡಿ, ಕಾದು ನೀಂ
ನಿನ್ನಯ ಬಲ್ಲ ಮಾಡ್ಕೆಯೊಳಿದಂ ನುಡಿದೆಂ ನಿನಗಂಗವಲ್ಲಭಾ ||

ಎಂದು ಅಂಗಾಧಿರಾಜನ ನಯದ, ವಿನಯದ, ಪಾಟಿಯ, ಪಸುಗೆಯ ನುಡಿಗಳ್ಗೆ ಮನದೆಗೊಂಡು, ಈತಂ ಕುಲಹೀನನಲ್ಲು, ಉಭಯ ಕುಲಶುದ್ಧನಾಗಲೆವೇಳ್ಕುಂ ಎಂದು ನಿಶ್ಚೈಸಿ, ಪರಸಿ, ಪೋಗೆಂಬುದುಂ, ಮಹಾ ಪ್ರಸಾದಮೆಂದು ಪೊಡವಟ್ಟು ಕರ್ಣಂ ಸಂಗ್ರಾಮಭೂಮಿಗೆ ವಂದಂ ''

ಹೀಗೆಯೇ ಉಳಿದವರಲ್ಲೂ ಕರ್ಣನು ಸೌಜನ್ಯವನ್ನು ಸ್ಪಷ್ಟಪಡಿಸಿರುವನು. ಕುಂತಿಯು ತನ್ನ ಬಳಿಗೆ ಬಂದಾಗ ಅವಳಿಗೆಷ್ಟು ಗೌರವವನ್ನೂ ಆದರವನ್ನೂ ತೋರಿಸಿದನು !

ಚಲಮುಂ ಚಾಗಮುಮಳವುಂ,
ಕಲಿತನಮುಂ, ಕುಲಮುಮಿಾಗಳೆನ್ನಯ ಮೆಯ್ಯೊಳ್
ನೆಲಸಿದುವು ನಿಮ್ಮ ಕರುಣಾ
ಬಲದಿಂ ನೀವೆನ್ನನಿಂದು ಮಗನೆಂದುದಱಿಂ ||

ಪಡೆದರ್ ತಾಯುಂ ತಂದೆಯು
ಮೊಡಲಂ ಪ್ರಾಣಮುಮನವರವವು ಕೆಯ್ಯೆಡೆಯಂ
ಕುಡುವುದರಿಂದಾಯ್ತೆ ನೀವೆನ
ಗೆಡೆಮಡಗದೆ ಬೆಸಪ ತೊೞ್ತುವೆಸನಂ ಬೆಸಸಿಂ ||

ಕುಂತಿಯು ಆಜ್ಞಾಪಿಸಿದ್ದ ತಾಯ್ತನಕ್ಕೆ ಪ್ರತಿಯಾಗಿ ಇಂತಹ ಭಕ್ತಿಯನ್ನೂ ಗೌರವವನ್ನೂ ಮಾಡುವ ಮಗನು ಲೋಕದಲ್ಲಿ ಮತ್ತಾರಾದರೂ ಇದ್ದಾರೋ ?

## ಕರ್ಣನ ಔದಾರ್ಯ

ಕರ್ಣನ ಚಾಗವು ಲೋಕಪ್ರಸಿದ್ಧವಾದುದು. "ಬೇಡಿದುದಂ ಮುಟ್ಟಲಾಗ ದೆನಗೆ'' ಎಂಬುದು ಅವನ ವ್ರತ. ಬಾಲ್ಯದಿಂದಲೂ ಇದು ಅವನಿಗೆ ಸಹಜವಾಗಿ ಬಂದ ಗುಣ. ಸೂತನ ಮನೆಯಲ್ಲಿದ್ದಾಗಲೇ ಇವನ ಚಾಗದ ನೆಗಳ್ತೆಯು ಭುವನ ಭವನಕ್ಕೆಲ್ಲ ಪ್ರಖ್ಯಾತವಾಗಿ ಹೋಗಿತ್ತು. ದುರ್ಯೋಧನನ ಸಂಬಂಧವೊದಗಿ ಅಂಗದೇಶದ ಒಡೆತನವು ಬಂದ ಮೇಲೆ ಅದಕ್ಕೆ ಮತ್ತೂ ಕಳೆಯೇರಿತು. ದೇವಸಬಳದ ಪದಿನೆಂಟು ಕೋಟಿ ಪೊನ್ನನ್ನು ನಿತ್ಯದಾನಕ್ಕೆಂದು ಕೊಡುತ್ತಿದ್ದನು. ಕೊನೆಯ ವರೆಗೂ ಹೀಗೆಯೇ ನಡೆಯಿತು. ಅವನಿಗೆ ಸೈನ್ಯಾಧಿಪತ್ಯವು ಬಂದ ದಿನ ಅವನು

ಮಾಡಿದಷ್ಟು ದಾನವನ್ನು ಮತ್ತಾರೂ ಮಾಡಲಾರರು. "ತಲೆಯೊಳ್ ನಾಲಗೆಯುಳ್ಳ ಬೂತುಗಳ್ಗೆಲ್ಲಮಿಲ್ಲದೆನ್ನ ದಿತ್ತಂ" "ನಿಯೋಗಿಗಳ್ ತಂದು ಪುಂಜಿಸಿದ ಪಂಚರತ್ನದ ಪೊನ್ನ ರಾಶಿಗಳನರ್ಥಿಜನಕ್ಕೆ ಗೋಸನೆಯಿಟ್ಟು ಕುಡವೇಳ್ದು, ನಾಯಕರ್ಗೆಲ್ಲ-ಮುಡಲುಂ ತೊಡಲುಂ ಕೊಟ್ಟಂ ಯುದ್ಧಕ್ಕೆ ಹೊರಡುವಾಗ "ನಿಜರಥ ತುರಗ ದಿವ್ಯಾಸ್ತ್ರಂಗಳುಟಿಯೆ, ಪಸುರ್ಮಣಿಯಸಪ್ಪೊಡಮುಟಿಯುದಂತು ಚಾಗಂಗೆಯ್ದು, ಚಾಗದ ಜೀರದ ಪಟಿಯಿಗೆಯನೆತ್ತಿಸಿದಂ."

'ಅತಿದಾನಾದ್ಧತಃಕರ್ಣಃ' ಎಂದು ನಾಣ್ಣುಡಿಯುಂಟು. ಆತನ ದಾನಕ್ಕೆ ಅಡ್ಡಿಯೇ ಇಲ್ಲ; ಬೇಡುವವನ ಆಶಯವೇನು? ಕೊಟ್ಟರೆ ತನಗೇನಾಗುತ್ತದೆ? ಎಂಬ ಯೋಚನೆಯೇ ಅವನಿಗೆ ಹತ್ತದು. ಅವನ ಬಳಿಗೆ ಬೇಡಲು ಬಂದವರು ಅವನ ಪ್ರಾಣವನ್ನು ಕಸಿಯುವವರು. ತಾವು ಬದುಕಬೇಕೆಂದು ಬಂದವರಲ್ಲ.

ಕರ್ಣನು ಇನ್ನೂ ಸೂತನ ಮನೆಯಲ್ಲಿದ್ದಾನೆ. ಮುಂದೇನಾಗುವನೋ ಅವನಿಗೇ ತಿಳಿಯದು. ಪಾಂಡವರಾರೂ ಹುಟ್ಟಿಲ್ಲ. ಆಗಲೇ ಇಂದ್ರನಿಗೆ ಯೋಚನೆ. "ಮುಂದೆ ತನ್ನಂಶದೊಳ್ ಪುಟ್ಟುವರ್ಜುನಂಗೆ ಇವನೊಳ್ ದ್ವಂದ್ವಯುದ್ಧಮುಂಟೆಂಬುದಂ ದಿವ್ಯಜ್ಞಾನದಿಂದಱಿದು, ಇಂತಲ್ಲದೀತನನಾತಂ ಗೆಲಲ್ ಬಾರದೆಂದು

ಬೇಡಿದೊಡೆ ಬಲದ ಬರಿಯುಮ
ನೀಡಾಡುಗುಮುಗಿದು ಕರ್ಣನೆಂದಾಗಳೆ ಕೈ
ಗೂಡಿದ ವಟುವಾಕೃತಿಯೊಳೆ
ಬೇಡಿದನಾ ಸಹಜಕವಚಮಂ ಕುಂಡಳಮಂ ||

ಇಂದ್ರನೇನೋ ಬೇಡಿದನು. ಆದರೆ, ಅದು ಕೊಡತಕ್ಕುದೆ? ಕೊಟ್ಟರೆ ಅವನಿಗೆ ಆದರಿಂದ ಪ್ರಯೋಜನವೇನಾದರೂ ಉಂಟೆ? ತನ್ನ ಪಾಡೇನಾಗುವುದು? ಇದೊಂದನ್ನೂ ಕರ್ಣನು ಯೋಚಿಸಬೇಡವೇ? ಸಾಲದುದಕ್ಕೆ ಸೂರ್ಯನೂ ಸಕಾಲದಲ್ಲಿ ಎಚ್ಚರಿಸಿದ್ದಾನೆ "ಪಾಂಡುಪುತ್ರರನೆ ಕಾಡೆಱೆವಂ; ದಲ್" ಎಂದು. ಆದರೂ ಕರ್ಣನು ಗಮನಿಸಲೇ ಇಲ್ಲ.

ಬೇಡಿದುದನರಿದುಕೊಳ್ಳನೆ
ಬೇಡಿದುದಂ ಮುಟ್ಟಲಾಗದೆನಗೆನೆ ನೆಗಟ್ದು
ಲ್ಲಾಡದೆ ಕೊಳ್ಳೆಂದರಿದೀ
ಡಾಡಿದನಿಂದ್ರಂಗೆ ಕವಚಮಂ ಕುಂಡಳಮಂ ||

ಎಂದುಂ ಪೋಗೆಂದನೆ? ಮಾ
ಣೆಂದನೆ? ಪೞಿತೊಂದಣೀವೆನೆಂದನೆ? ನೊಂದಃ

ಎಂದನೆ ಸೆರಗಿಲ್ಲದೆ ಪಿಡಿ
ಯೆಂದಸಿದೇಂ ಕಲಿಯೊ ಚಾಗಿಯೋ ರವಿತನಯಂ ||

ಹೀಗೆ ಧರ್ಮಕರ್ಮಗಳನ್ನರಿಯದೆ ನಿರ್ದಯನಾಗಿ ಬಂದು ಬೇಡಿದ ಇಂದ್ರನನ್ನೂ ಕೂಡ, ಕರ್ಣನ ಈ ಅತ್ಯೌದಾರ್ಯವು ಬೆರಗುಮಾಡಿತು. ಅವನು ಕರ್ಣನಲ್ಲಿ ಅನುಗ್ರಹವಿಟ್ಟು

ಸುರ ದನುಜ ಭುಜಗ ವಿದ್ಯಾ
ಧರ ನರ ಸಂಕುಲದೊಳಾರನಾದೊಡಮೇನೋ
ಗರ ಮುಟ್ಟೆ ಕೊಲ್ಗುವಿದು ನಿಜ
ವಿರೋಧಿಯಂ ಧುರದೊಳೆಂದು ಶಕ್ತಿಯನಿತ್ತಂ ||

ಮತ್ತೊಂದು ನಿದರ್ಶನ:—ಹರಿಯ ಮಾತಿನಂತೆ ಕುಂತಿಯು ಕರ್ಣನ ಬಳಿಗೆ ಬಂದಾಗ ಅವನು ಅವಳಿಗೆ ನಮಸ್ಕರಿಸಿ ವಿನಯದಿಂದ ನಿಂತಿದ್ದನು. ಆ ಸಮಯದಲ್ಲಿ "... ಒಪ್ಪುವ ನಿಜಬಿಂಬದೊಳಗಣಿಂದಂ ದಿನಪಂ

ಪೊಱಮಟ್ಟು ಬರಲ್ ತನ್ನಡಿ
ಗೆಱಗಿದ ನಿಜಸುತನನಟ್ಟುಱಿಂ ಪರಸಿ ಮನಂ
ಮಱುಗಿ ರವಿ ನುಡಿದನೆನ್ನುಮ
ನುಱಿದೆ ಮಪುಳ್ಮಗನೆ, ಹರಿಗೆ ಕವಚಮನಿತ್ತೈ ||

ನುಡಿಯೆನದಂ ನಿನ್ನಂಬಿಕೆ
ಪಡೆಮಾತೇಂ ಕೊಂತಿ ಹರಿಯ ಮತದಿಂ ಕಾಯ
ಲ್ಕೊಡರಿಸಿ ಬಂದಳ್ ಸುತರಂ
ಕುಡದಿರ್ ಪುರಿಗಣೆಯನೆನಿತು ಲಲ್ಲೈಸಿದೊಡಂ ||

ಎಂದು ಎಚ್ಚರಿಸಿ ಅಂಬರತಳವನ್ನು ಸೇರಿದನು. ಸೂರ್ಯನು ಹೀಗೆ ಹೇಳಿ ತಾನು ಮರುಳಾದನೇ ಹೊರತು ಕರ್ಣನು ಬೇರೆ ಅವನ ಮಾತಿಗೆ ಕಿವಿಗುಡಲಿಲ್ಲ. ಅವನ ತಲೆ ಮರೆಯಾದ ಒಡನೆ

ಚಲಮುಂ, ಚಾಗಮುಮುಳವುಂ,
ಕಲಿತನಮುಂ, ಕುಲಮುಮಿವಾಗಳೆನ್ನಯ ಮೆಯ್ಯೊಳ್
ನೆಲಸಿದುವು ನಿಮ್ಮ ಕರುಣಾ
ಬಲದಿಂ ನೀವೆನ್ನನಿಂದು ಮಗನೆಂದುದಱಿಂ ||

"... ನೀಮೆನಗೆಡೆಮಡಗದೆ ಬೆಸಪ ತೊಱ್ತುವೆಸನಂ ಬೆಸಸಿಂ" ಎಂದು ಹೇಳಿಯೇಬಿಟ್ಟನು. ಅವನು ದುರ್ಯೋಧನನ ಪಕ್ಷವನ್ನು ಬಿಟ್ಟು ತಮ್ಮ ಪಕ್ಷಕ್ಕೆ

ಸೇರಬೇಕೆನ್ನಲು ಖಂಡಿತವಾಗಿ ಆಗದೆಂದು ಉತ್ತರಕೊಟ್ಟೊಡನೆ "... ಕುಂತಿ ಘೋಂಕನೆರ್ದೆದೆಱೆದು"

ಅಱೆದೆಂ ನೆಟ್ಟನೆ ಬಟ್ಟನಿಂತು ನುಡಿವೈ! ನೀಂ ಕಂದ, ಪೋಗಿಂದೆ ಕೆ
ಟ್ಟಱೆದತ್ತಾಗದೆ ಸೋಮವಂಶಮೆನಗಿಂ ಬಾಪ್ಪಾಸೆಯಲ್ಲಿತ್ತೊ? ಬಿ
ಟ್ಟುಱೆದೆಂ ಮತ್ತಿನ ಮಕ್ಕಳಾಸೆಯುಮನಾನೆಂದೇಡೆ, ಶೋಕಾಗ್ನಿ ಪೊಂ
ಪುೞೆವೋಗುತ್ತಿರೆ,

ಅವಳ ಅವಸ್ಥೆಯನ್ನು ಕಂಡು ಕರ್ಣನು ಮರುಗಿ "ಇನಿತೇಂ ಪೇೞಬ್ಬೆ ಚಿಂತಾಂತರಂ"

ಪಿಡಿಯೆಂ ಪುರಿಗಣೆಯಂ ನರ
ನೆಡೆಗೊಂಡೊಡಮುೞಿದ ನಿನ್ನ ಮಕ್ಕಳನಿನ್ನೇ
ರ್ದೊಡಮುೞೆಯೆಂ, ಪೆರ್ಜ್ಜನಮನೆ
ಪಿಡಿದೆನ್ನನೆ ರಣದೊಳಿೞೆವೆನಿರದಡಿಯೆತ್ತೆಂ ||

ಎಂದು ಹೇಳಿ ಯಾರೂ ಊಹಿಸುವುದಕ್ಕೆ ಕೂಡ ಆಗದಂತಹ ಉದಾರವಾದ ದಾನವನ್ನು ಮಾಡಿದನು.

ಲೋಕರೀತಿಯಿಂದ ನೋಡಿದರೆ, ಕುಂತಿಯು ಮೊದಲು ತೋರಿದ 'ಪುತ್ರ ವಾತ್ಸಲ್ಯಕ್ಕೆ' ಮತ್ತೊಬ್ಬ ಮಗನು ಅವಳ ಮುಖವನ್ನೂ ನೋಡಬಯಸನು. ಕರ್ಣನಲ್ಲದೆ ಮತ್ತಾರಿಂದಲೂ ಇಂತಹ ಸ್ವಾರ್ಥತ್ಯಾಗವು ಸಾಧ್ಯವಿಲ್ಲ. "ಎನ್ನನೆ ರಣದೊಳಗೞೆವೆಂ, ಇರದಡಿಯೆತ್ತೆಂ" ಎಂದು ಹೇಳಿದನಲ್ಲಾ!

## ಕರ್ಣನ ಶೌರ್ಯ

ಕರ್ಣನು ಲೋಕೈಕವೀರನು. ಶತ್ರುಪಕ್ಷದಲ್ಲಿ ಅವನನ್ನು ಎದುರಿಸಿ ನಿಲ್ಲುವವರಿಲ್ಲ. ಅವನ ಶೌರ್ಯವು ಪ್ರಕಟವಾಗುವುದು ಭೀಷ್ಮದ್ರೋಣರ ಮರಣಾನಂತರದಲ್ಲಿ. ಅವರಿಬ್ಬರ ಅದ್ವಿತೀಯ ಪರಾಕ್ರಮದ ಜತೆಗೆ ಇವನದೂ ಕೂಡಿದ್ದರೆ ಪರಿಣಾಮ ವೇನಾಗುತ್ತಿತ್ತೋ ತಿಳಿಯದು. ಆದರೆ ವಿಧಿಯ ಸಂಕಲ್ಪವು ಬೇರೆಯಿತ್ತು. ಆದುದರಿಂದಲೇ ಕರ್ಣನಿಗೆ ವಿಪರೀತ ಬುದ್ಧಿಯೊದಗಿ ಭೀಷ್ಮರಿರುವವರೆಗೂ ಶಸ್ತ್ರವನ್ನು ಹಿಡಿಯುವುದಿಲ್ಲವೆಂದು ಪ್ರತಿಜ್ಞೆಮಾಡಿದನು. ಕೊನೆಗೆ ಇದಕ್ಕಾಗಿ ತಾನೇ ಮರುಗುತ್ತಾನೆ. "... ನದೀನಂದನಂಗೆ ರಣಕ್ಕಾಂ ನೆರವಾದೆನಪ್ಪೊಡಿನಿತೇಕಾದಪ್ಪುದು" ಎಂದು ಭೀಷ್ಮರು ಶರಶಯ್ಯೆಯಲ್ಲಿ ಮಲಗಿದನಂತರ ದುರ್ಯೋಧನನೊಡನೆ ತಾನೇ ಹೇಳಿದ್ದಾನೆ. ಕಟ್ಟಿದ ಬುತ್ತಿ ಎಲ್ಲಿ ಹೋಗಬೇಕು? ಕರ್ಣನು ಭೀಷ್ಮರ ವಿಷಯದಲ್ಲಿ ಪ್ರತಿಜ್ಞೆಮಾಡಿದಂತೆಯೇ ಇವನ ವಿಷಯದಲ್ಲೂ ಅಶ್ವತ್ಥಾಮನು ಪ್ರತಿಜ್ಞೆಮಾಡಿದನು.

"... ಈ ಖಳನಿಲ್ಲಿ ಧನಂಜಯ| ಕ್ರೂರ ಬಾಣಗಳಾವಳಿಯಿಂದಟ್ಟಾಡಿದೊಡಲ್ಲದೆ ವೈರಿ| ಸಂಹಾರಕಾರಣಚಾಪಮನಾನೀ ಸಂಗರದೊಳ್ ಪಿಡಿಯೆಂ ಗಡಾ '' ಎಂದು. ಅಂತೂ, ಒಟ್ಟಿನಲ್ಲಿ ಕರ್ಣನ ಸಾಹಸಕ್ಕೆ ಮತ್ತಾರ ಸಾಹಸವೂ ಸರಿವಾಗಲಿಲ್ಲ. ಇಂದ್ರನೂ ಕುಂತಿಯೂ ದಾನವನ್ನು ಬೇಡಿ ಅವನ ಅರ್ಧ ಶೌರ್ಯವನ್ನು ಕಸಿದು ಬಿಟ್ಟರು. ಆದರೂ ಅವನು ಧೈರ್ಯಗೆಡಲಿಲ್ಲ. ಪಾಂಡವರನ್ನು ಕೊಲ್ಲುವುದು ಅವನಿಗೆ ಅಸಾಧ್ಯವಾಗಿರಲಿಲ್ಲ. ಆದರೆ, ಅವರು ಒಡಹುಟ್ಟಿದವರೆಂಬ ವಾತ್ಸಲ್ಯವೂ, ಕುಂತಿಗೆ ಕೊಟ್ಟ ಮಾತೂ ಅವನ ಶೌರ್ಯವನ್ನು ಹಿಮ್ಮೆಟ್ಟಿಸುತ್ತಿದ್ದುವು.

ಪಾಂಡವರಲ್ಲಿ ಭೀಮನು ಕೇವಲ ಸಾಹಸಿಯಷ್ಟೆ! ಕರ್ಣನ ಕೈಯಲ್ಲಿ ಸಿಕ್ಕಿ ಅವನೇನಾದನೆಂದು ನೋಡೋಣ. ಅಭಿಮನ್ಯುವಿನ ವಧೆಯಾದನಂತರ ಅರ್ಜುನನು ಸೈಂಧವನನ್ನು ಕೊಲ್ಲುವುದಾಗಿ ಪ್ರತಿಜ್ಞೆಮಾಡಿದನು. ಇತ್ತ ದ್ರೋಣಾಚಾರ್ಯರೂ ಅವನನ್ನು ಹೇಗಾದರೂ ಕಾಪಾಡಿಯೇ ತೀರುವುದಾಗಿ ಮಾತುಕೊಟ್ಟು ಚಕ್ರವ್ಯೂಹ ವನ್ನು ಹೂಡಿದರು. ಇಕ್ಕಡೆಯವರಿಗೂ ಹಣಾಹಣಿ ಯುದ್ಧವಾಗುತ್ತಿರಲು, ಭೀಮ ಸೇನನು "ಗುರುಗೆ ಗುರುದಕ್ಷಿಣೆಗುಡುವಂತೆ ಅವರ (ದ್ರೋಣಾಚಾರ್ಯರ) ರಥಮಂ ಶತಚೂರ್ಣಂ ಮಾಡಿ ಕಳಿಂಗರಾಜಘಟೆಗಳನೌಂಕಿ, ಸೂರ್ಕುತ್ತುಂಬರೆ "ದುಶ್ಶಾಸ ನಾದಿಗಳು ಬಂದು ಇದಿರಿಸಿದರು. ಆಗ "ನಿಡುವಗೆ ಸೈಪಿನಿಂ ದೊರೆಕೊಂಡುದು; ಇವರ್ ಗಜಿಗೊಂಡೆನಪ್ಪೊಡೀಗಡೆ ಪರೆದಪ್ಪರ್; ಎಚ್ಚು ತವೆಕೊಲ್ವೆನಿವಂದಿರಂ" ಎಂದು ಚಿಂತಿಸಿ, ಭೀಮನು ದುರ್ಮುಖ ದುರ್ಧರ್ಷಣ ಮುಂತಾದ ಮೂವತ್ತು ಮೂವರು ಕೌರವರನ್ನು ಕೊಂದು ದುಶ್ಶಾಸನನನ್ನು ವಿರಥನಾಗಿಮಾಡಿ, ದುರ್ಯೋಧನನನ್ನು "ಒಂದೆ ವಿಶಿಖಹತಿಯಿಂ ಸುರುಳ್ದುರುಳ್ವಿನಂ '' ಎಚ್ಚು ಮೂರ್ಛೆಬೀಳಿಸಿ, ಸಿಂಹನಾದ ಮಾಡುತ್ತ ಅವನ ಸಮೀಪಕ್ಕೆ ಬಂದನು. ಆಗ "ಆಳ್ದನ ಸಾವಂ ನೋಡಲಾಱದೆ''

ಎಡೆಗೊಂಡಂಕದ ಕರ್ಣನೆಯ್ದೆವರೆ, ದಿವ್ಯಾಸ್ತ್ರಂಗಳಿಂದಂ ಸಿಡಿಲ್<br>
ಪೊಡೆವಂತಪ್ಪಿನಮೆಚ್ಚುದಗ್ರರಥಮುಂ ಮುಯ್ಯೇೞು ಸೂಟ್ ಕೋಪದಿಂ<br>
ಕಡಿಯಲ್ ಸಾರ್ದೊಡಬಲ್ಲು ಸೂತಸುತನೊಂದುಗ್ರೇಷುವಿಂ ತಿಣ್ಣಮೆ<br>
ಚ್ಚೊಡನಾರ್ದಂ ನಸುಮೂರ್ಛೆವೋಗಿ ರಥದೊಳ್ ಭೀಮಂ ನರಲ್ವನ್ನೆಗಂ||

ಭೀಮನು ಮೂರ್ಛೆಬೀಳಲು 'ಅವನ ಕೊರಲೊಳ್ ಬಿಲ್ಲಂ ಕೋದು ಮೇಗಿಲ್ಲದೆ ತೆಗೆದು,

ತಾಂ ಗಡಮೆನ್ನಾಳ್ದನ ತೊಡೆ<br>
ಯಂ ಗಡಮಿನ್ನುಡಿವನೆನ್ನೊಳಂ ಕಾದುವನೆಂ

ದಂಗಪತಿ ನುಡಿದು, ಕೊಲ್ಲದೆ
ಪಿಂಗಿಧನಂಬಿಕೆಗೆ ನುಡಿದ ನುಡಿ ನಿಲೆ ಮನದೊಳ್ ||

ಕರ್ಣನು ದಯೆತೋರಿ ಭೀಮನಿಗೆ ಪ್ರಾಣದಾನಮಾಡಿದನು.

ಇನ್ನೊಂದು ಸಲ, ಕರ್ಣನಿಗೂ ಧರ್ಮರಾಜನಿಗೂ ಯುದ್ಧ ನಡೆಯುತ್ತಿದೆ; ಕರ್ಣನ ಬಾಣದಿಂದ ಧರ್ಮರಾಜನು ರಕ್ತವನ್ನು ಕಾರಿ ಮೂರ್ಛೆಗೊಂಡಿದ್ದಾನೆ. ಅದನ್ನು ಕಂಡು "... ನೊಂದು, ನಂದಿಸದೆ, ತನ್ನನೆ ನಿಂದಿಸಿದಂ ದಿನೇಶಜಂ" "ಅಂತು ಕೊಂತಿಗೆ ನಾಲ್ವರೊಳಾರುಮಂ ಕೊಲ್ಲೆನೆಂದು ನುಡಿದ ತನ್ನ ನನ್ನಿಗೆ ಬನ್ನಂ ಬಂದಪುದೆಂದು ಚಿಂತಿಸುತಿರ್ದಂ."

ಆ ವೇಳೆಗೆ ಧರ್ಮರಾಜನ ಸಹಾಯಕ್ಕೆಂದು ನಕುಲಸಹದೇವರು ಬರಲು ಕರ್ಣನು "ಇವರನೇಗೆಯ್ವುದೆಂದು ಕರುಣಿಸಿ ಶಲ್ಯನ ಮನಮಂ ನೋಡಲೆಂದು ಬೆಸಗೊಂಡನು." ಅವನೂ ಸಹ "ತನ್ನಳಿಯಂದಿರ ಸಾಏಂಗಾಟಿದೆ" "ನಿನ್ನೊಳಿ ವಂದಿರೇತಱೊಳ್ ದೊರೆ? ದೊರೆವೆತ್ತ ಕಾಳಗದ ಗೆಲ್ಲದ ಸೋಲದ ಮಾತು ನಿನ್ನೊಳಂ ನರನೊಳಮಿರ್ದುದು. ಉಯ್ಗೆ ಸಿಸುಗಳ್ ಸಿಬಿರಕ್ಕೆ ಬಟಲ್ದ ಭೂಪನಂ" ಎಂದು ಹೇಳಲು ಕರ್ಣನು ಅವರನ್ನು ಬಿಟ್ಟುಬಿಟ್ಟನು.

ಕರ್ಣನ ಪರಾಕ್ರಮವನ್ನು ವರ್ಣಿಸಿ ಹೇಳುವುದಕ್ಕಾಗದು. ಅದರ ಅನುಭವ ವಿರುವವರನ್ನೇ ಕೇಳಬೇಕು. ಅರ್ಜುನನು ಸಮಶಪ್ತಕರನ್ನು ಗೆದ್ದ ತರುವಾಯ ಧರ್ಮರಾಜನಿಗೆ ಕರ್ಣನಿಂದ ಪೆಟ್ಟುಬಿದ್ದ ಸಂಗತಿಯನ್ನು ಕೇಳಿ ಗಾಬರಿಯಿಂದ ವಿಚಾರಿಸಲು ಬರುವನು. ಆಗ ಧರ್ಮರಾಜನು ಕರ್ಣನ ಸಾಹಸದ ಅನುಭವವನ್ನು ಹೇಳುವನು.

ಇನ್ನುಂ ಕರ್ಣನ ರೂಪೆ ದ
ಲಿನ್ನೆರ್ದೆಯೊಳಮೆನ್ನ ಕಣ್ಣೊಳಂ ಸುಟಿದಪುದಾಂ
ತನ್ನೆಚ್ಚ ಶರಮುಮಂ ಗೆ
ಲ್ದಿನ್ನುಮನಂಜಿಸಿದನೆಂದೊಡಿನ್ನೇನೆಂಬೆಂ ||

ಏಂ ಮೊಗ್ಗೆ ಕರ್ಣನಿಂತೀ
ನಿಮ್ಮಂದಿಗರಿಱಿಯೆ ಸಾವನೇ? ಸುಖಮಿರಿಮಿ
ನ್ನಮ್ಮ, ಸುಯೋಧನನೊಳ್ ಪಗೆ
ಯಮ್ಮಱಿದಾನುಂ ತಪೋನಿಯೋಗದೊಳಿರ್ಪೆಂ ||

ಕರ್ಣನನ್ನು ಗೆಲ್ಲುವುದು ಸಾಧ್ಯವಲ್ಲವೆಂದು ಯುಧಿಷ್ಠರನಿಗೆ ತೋರಿಹೋಯಿತು. ಅವನ ಮನಸ್ಸಿನಲ್ಲಿ ಮತ್ತೆ ನಂಬಿಕೆಯನ್ನು ಹುಟ್ಟಿಸಲು ಅರ್ಜುನನು ಎಷ್ಟೋ ಶ್ರಮ

ಪಡಬೇಕಾಯಿತು. "ನಿಮ್ಮಂ ಮುಳಿಯಿಸಿದ ಸುರಾಸುರರುಮನೊಳರೆನಿಸೆಂ, ಕರ್ಣನೆಂಬನೆನಗೇವಿರಿಯಂ ?"

ಎಂದರಸ, ನೇಸಱಿಂದೊಳ
ಗಾಂ ದಿನಕರಸುತನನಿಕ್ಕಿ ಬಂದಲ್ಲದೆ ಕಾ
ಣೆಂ ದಲ್ ಭವಪದಾಬ್ಜಮ
ನೆಂದೆಟ್ಟನುದಶ್ರುಜಳಲವಾರ್ದ್ರ ಕಪೋಳಂ ||

ಹೀಗೆಂದು ಪ್ರತಿಜ್ಞೆಮಾಡಿ ಅರ್ಜುನನು ರಣಭೂಮಿಗೆ ಹೋದನು. "ಮುಗಿಲೂಱಿದ ಮೂಱುಲೋಕಮುಂ ಕರ್ಣಾರ್ಜುನರ ಯುದ್ಧಮಂ ನೋಡಲ್ ನೆರೆದುದು" ಸಂಪ್ರದಾಯದಂತೆ ಇಬ್ಬರಿಗೂ ಮೊದಲೆಯ ಮಾತುಗಳು ನಡೆದುವು. ಕರ್ಣನು ಅರ್ಜುನನಿಗೆ ಕೊಟ್ಟ ಉತ್ತರವಿದು.—

ಕನವರದ ಸವಿಯುಮಂ, ಭಯ
ರಸಕದ ಸವಿಯುಮನದೆಂತುಮಾನಱಿಯದುದಂ
ವಸುಮತಿಯಱಿವುದು ; ನೀಂ ಪುರು
ಡಿಸಿ ನುಡಿದೊಡೆ ನಿನ್ನ ನುಡಿದ ಮಾತೇಱುಗುಮೇ ||

ಒಡಲುಂ ಪ್ರಾಣಮುಮೆಂಬಿವು
ಕಿಡಲಾದುವು ; ಜಸಮದೊಂದೆ ಕಿಡದದನಾಂ ಬ
ಲ್ಪಿಡಿವಿಡಿದು ನೆಗಡ್ದೆನುಟಿದಟಿ
ವಡೆಮಾತಂ ಮಾಡಿ ನೀನೆ ಕೆಮ್ಮನೆ ನುಡಿವೈ ||

ಬಿದಿವಸದಿಂದೆ ಪುಟ್ಟುವುದು ; ಪುಟ್ಟಿಸುವಂ ಬಿದಿ, ಪುಟ್ಟಿದಂದಿವಂ
ಗಿದು ಬಿಯಮೊಳ್ಪಿವಂಗಿದು, ವಿನೋದವಿವಂಗಿದು, ಸಾವ ಪಾಂಗಿವಂ
ಗಿದು, ಪಡೆಮಾತಿವಂಗಿದು, ಪರಾಕ್ರಮಮೆಂಬುದನೆಲ್ಲ ಮಾಡ್ಕೆಯಿಂ
ಬಿದಿ ಸಮಕಟ್ಟಿ ಕೊಟ್ಟೊಡೆಡೆಯೊಳ್ ಕಿಡಿಸಲ್ ಕುಡಿಸಲ್ ಸಮರ್ಥರಾರ್ ? ||

ಆಹ! ಎಂತಹ ಮಾತುಗಳು! ನಿಜ! ಕರ್ಣನು ಸ್ವೋಪಯೋಗಕ್ಕಾಗಿ ಹಣವನ್ನು ಬಳಸಿ ಅದರ ಸವಿಯನ್ನು ಕಂಡವನೇ ಅಲ್ಲ; ಭಯರಸದ ಅನುಭವವಂತೂ ಅವನಿಗೆ ಗೊತ್ತೇ ಇಲ್ಲ ; ಸಾಯಲು ಅವನು ಹೆದರತಕ್ಕವನಲ್ಲ; ಒಡಲೂ ಪ್ರಾಣವೂ ಕಿಡತಕ್ಕುವು ; ಜಸವೊಂದೇ ಸ್ಥಿರ; ಹುಟ್ಟಿಸುವವನೂ ಕೊಲ್ಲುವವನೂ ಬಿದಿ ; ಕೆಡಿಸಲೂ ಕೊಡಿಸಲೂ ಮತ್ತಾರು ಸಮರ್ಥರು ?

ಎಂದೀ ಬಾಯ್ವಾತಿನೊಳೇ
ವಂದಪುದಮ್ಮಣ್ಮೆ ಕಾದುಕೊಳ್ಳೆನುತುಂ ಭೋ

ರೆಂದಿಸೆ ಪೊಸಮುಸೆಯಂಬಿನ
ತಂದಲ ಬೆಳ್ಸರಿಗಳಿರದೆ ಕವಿದುವು ನರನಂ ||

ದೊಣೆಗಳಿನುಚ್ಚುರ್ಗವ, ತಿರುವಾ
ಯ್ವೊಣರ್ಚಿ ತೆಗೆ ನೆಱೆವ, ಬೇಗಮಂ ಕಾಣದೆ ಕೂ
ರ್ಗಣೆಗಳ ಪಂದರನೆ ನಭೋಂ
ಗಣದೊಳ್ ಕಂಡತ್ತು ದೇವಗಣಮಿನಸುತನಾ ||

ಅರ್ಜುನನೇನು ಸಾಮಾನ್ಯನೇ ?

ಮುನಿದಿಸುವಿನಜನ ಸರಲಂ
ಮೊನೆಯಿಂ ಗಱಿವರೆಗಮೆಯ್ದೆ ಸೀಳ್ದುವು ಕಣೆಗಳ್
ಘನಪಥಮನಳುರ್ದು ಸುಟ್ಟುವು
ವೆನೆ ನೆಗೆದುವು ಕೋಲ ಪೊಗೆಯುಮಂಬಿನ ಕಿಡಿಯುಂ ! ||

ಆಗ ಕರ್ಣನ ಸಾರಥಿಯಾದ ಶಲ್ಯನು "ಈಯಂಬುಗಳೊಳೇತೀರ್ದಪುದು ? ದಿವ್ಯಾಸ್ತ್ರಗಳಿಂದೆಚ್ಚು ಪಗೆಯುಂ ಸಾಧ್ಯಂ ಮಾಡು" ಎಂದನು. ಆಗ ಕರ್ಣನು "ಕೊಂತಿಗೆ ತನ್ನ ನುಡಿದ ನುಡಿವಳಿಯುಂ ನೆನೆದು, ಪುರಿಗಣೆಯ ದೊಣೆಗೆ ಕೆಯ್ಯಂ ನೀಡಡೆ, ರೌದ್ರಶರದ ದೊಣೆಗೆ ಕೆಯ್ಯಂ ನೀಡಿದನು" ಆಗ ಅವನ ಕೈಗೆ ಸರ್ಪಾಸ್ತ್ರವು ಬಂದಿತು. ಅದನ್ನು ತಿರುಗಿಸಲು "ಎಳೆ ತಿಟ್ಟನೆ ತಿರಿದುದು. ತಿರುವಾಯೊಳಿಡೆ ಸುರರ್ ಮೊಱೆಯಿಟ್ಟರ್."

ತುಡೆ ಕರ್ಣನದಂ ನಡನಡ
ನಡುಗಿ ಸುಯೋಧನನ ಸಕಲರಾಜ್ಯಶ್ರೀಯುಂ
ಸಡಿಲಿಸಿದ ತೋಳನಾಗಳ್
ಸಡಿಲಿಸಲಣ್ಮಳೆ ದಲದಟಿಗುರ್ವೇಂ ಪಿರಿದೋ ! ||

ಹೀಗೆ ಬಾಣವನ್ನು ಸೇರಿಸಿ, ಆಕರ್ಣಾಂತವೆಳೆದು ಬಿಡಲು ಯತ್ನಿಸಿದಾಗ ಶಲ್ಯನು, "ಇಳಿಸು, ಇಳಿಸು ಬಿಡಬೇಡ" "ಈ ಭೀಕರ ಬಾಣಮನಾದವಿವೇಕದಿನುರದೆಡೆಗೆ ತುಡವೆ ತಲೆಗೆಯೆ ತುಡುವಾ ?"

ಉರದೆಡೆಗೆ ತುಡೆ, ಜಯಶ್ರೀ
ಗಿರಲೆಡೆ ಸಿನಗಪ್ಪುದಾ ಸುಯೋಧನನೊಳ್ ಶ್ರೀ
ಗಿರಲೆಡೆಯಪ್ಪುದು, ಮೇಣ್ ದಿನ
ಕರಸುತ, ತೊಡಳುಂಟೆ ? ಬಗೆಯೆ ಸಂದೆಯಮುಂಟೇ ? ||

ಎಂದು ಹೇಳಿದನು.

ಕರ್ಣನದು ಶ್ವಾಪದಶೌರ್ಯವಲ್ಲ; ಸತ್ಯ, ದಯೆ, ಧರ್ಮ ಮುಂತಾದುವು ಗಳೊಡನೆ ಬೆರೆತ ಲೋಕಾತೀತವಾದ ಪರಾಕ್ರಮವದು. ಮನಸ್ಸು ಮಾಡಿದ್ದರೆ ಈಗ ಅರ್ಜುನನನ್ನೂ ಅನಾಯಾಸವಾಗಿ ಕೊಲ್ಲಬಹುದಾಗಿತ್ತು. ಆದರೆ ದುರ್ಯೋಧನನ ದುರ್ದೈವದಿಂದ ಪಾಂಡವರ ಬಾಂಧವ್ಯ, ಕುಂತಿಗೆ ಕೊಟ್ಟಮಾತು, ಇವೆರಡೂ ಅವ ನಿಗೆ ನೆನಪಾದುವು ; ಅವನು ಯೋಚಿಸುವುದನ್ನು ನೋಡಿ :—

ಎನಿತುಂ ಶಲ್ಯನ ಪೇೞ್ದ ಪಾಂಗೆ, ತೊದಳಿಲ್ಲಿಂತಾದೊಡಾ ಶಕ್ರಪು
ತ್ರನನಾಂ ಕೊಂದೊಡೆ ಧರ್ಮಪುತ್ರನಟಿಗುಂ, ತಾಯೆಂದೆ ಮುಂ ಕೊಂತಿ ಬಂ
ದಿನಿಸಂ ಪ್ರಾರ್ಥಿಸಿ ಪೋದಳೆನ್ನನದನಾಂ ಮಾಣ್ದೆ ರ್ದನಿರ್ದಾಗಳೊ
ಳ್ಪಿನ ಪೆರ್ಮ್ಮಾತಿನ ನನ್ನಿ ಬನ್ನದೊಳೊಡಂಬಟ್ಟಿರ್ಪುದಂ ಮಾಪ್ಪೆನೇ ! ||

"ಅಱಿಯರ್ ಪಾಂಡವರೆನ್ನನಿನ್ನುಂ . . . . . ಕಾವೆನೆನ್ನ ನುಡಿಯಂ ಕೆಯ್ಕೊಂಡ ಕಟ್ಟಾಯಮಂ"

ಎಂಬುದನೆ ಬಗೆದು, ಪೆಱತನ
ಣಂ ಬಗೆಯದೆ, ಮದ್ರಪತಿಯನೆಂದಂ ಮುಂ ತೊ
ಟ್ಟಂಬನದನುಗಿದು ಕುಂದಿಸಿ
ದಂ ಭಯದಿಂ ಕರ್ಣನೆಂದು ಲೋಕಂ ನಗದೇ ||

ಅರ್ಜುನನನ್ನು ಹೊರತು ಮಿಕ್ಕ ನಾಲ್ವರನ್ನೂ ಕೊಲ್ಲೆನೆಂದು ಕುಂತಿಗೆ ಮಾತು ಕೊಟ್ಟಿದ್ದನು. "ಈಗ ಅರ್ಜುನನನ್ನು ಕೊಂದರೆ, ಧರ್ಮರಾಜನು ತನ್ನ ಪ್ರತಿಜ್ಞೆ ಯಂತೆ ತಾನೂ ಸಾಯುವನು. ಅಲ್ಲಿಗೆ ಧರ್ಮರಾಜನ ಸಾವಿಗೆ ತಾನೇ ಕಾರಣ ವಾದಂತೆ ಆಗುವುದರಿಂದ ತನ್ನ ಮಾತಿಗೆ ಭಂಗಬಂತೆಂ"ದು ನೆನೆದು ಅರ್ಜುನನನ್ನು ಳಿಸು ವುದೇ ಇದಕ್ಕೆ ಉಪಾಯವೆಂದು ನಿಶ್ಚಯಿಸಿದನು. "ಇಟ್ಟ ಗುರಿಯನ್ನು ತಗ್ಗಿಸುವುದು ತನ್ನ ಬೀರಕ್ಕೂ ನನ್ನಿಗೂ ತಕ್ಕುದಲ್ಲ"ವೆಂದು ಶಲ್ಯನಿಗೆ ಹೇಳಿ, ದುರ್ಯೋಧನನ ಅದೃಷ್ಟವಿದ್ದರೆ ಈ ಗುರಿಯೇ ಫಲಿಸುವುದೆಂದು ಯೋಚಿಸಿ ಹಾಗೆಯೇ ಬಾಣವನ್ನು ಬಿಟ್ಟನು.

ಇಗೋ ! ದೈವವು ಅಡ್ಡಬಂದಿತು.

. . . . . ಬೞಿ
ಸಿಡಿಲೆಱಿವಂತೆಱಿಪ ಸರಲ ಬರವಂ ಕಂಡಾ
ಗಡೆ ಚಕ್ರಿ ನೆಲನೊಳೆಣ್ಬೆರ
ಲಡಂಗೆ ನರನ ರಥಮನೊತ್ತಿದಂ ನಿಪುಣತೆಯಿಂ ||

ಸರಿ ! ಕುತ್ತಿಗೆಯನ್ನು ಕೊಳ್ಳಲು ಬಂದ ಶರಕ್ಕೆ ಕಿರೀಟವು ಸಿಕ್ಕಿತು. ಅರ್ಜುನನು ಸುರಕ್ಷಿತವಾಗಿ ಉಳಿದನು.

ಆಗ ಸರ್ಪಾಸ್ತ್ರವು

. . . . . . . . . . . . . . . . . . ನೊಂದು ಪ
ಲ್ಮೊರೆದಹಿರೂಪದಿಂ ಮಗುಬ್ದು ಬಂದಿನನಂದನನಲ್ಲಿಗೆನ್ನನಂ
ತರಿಸದೆ ತೊಟ್ಟು ಬೇಗಮಿಸು, ವೈರಿಯಶೀಗಳೆ ಕೊಂದಪೆಂ, ರಸಾಂ
ಬರ ಧರಣೀ ವಿಭಾಗದೊಳಗಾವೆಡೆವೊಕ್ಕೊಡಮಂಗನಾಯಕಾ ||

ಎಂದು ಬೇಡಿಕೊಳ್ಳಲು, ಅರ್ಜುನನ ಮೇಲಣ ದ್ವೇಷದಿಂದ ತನ್ನ ಬತ್ತಳಿಕೆಯನ್ನು ಸೇರಿದ್ದ ಅಶ್ವಸೇನನೆಂಬ ಸರ್ಪವು ಅದು ಎಂದರಿದು ಕರ್ಣನು ಅದಕ್ಕೆ ಉತ್ತರ ಕೊಟ್ಟನು.—

ಶರರೂಪದೊಳಿರೆ ನಿನ್ನಂ
ಶರಮೆಂದಾಂ ತೊಟ್ಟನಱಿದು ತುಡುವೆನೆ ನಿನ್ನಂ?
ನೆರದೊಳ್ ಕೊಲ್ವಂತೆನಗೇ
ನರಿಯನೆ ಗಾಂಡೀವಧನ್ವನೆಂಬುದುಮಾಗಳ್ ||

ಇದನ್ನೆಲ್ಲ ನೋಡಿ ಶಲ್ಯನಿಗೆ ತಡೆಯದಷ್ಟು ಕೋಪ ಬಂದಿತು. ತನ್ನ ಮಾತಿನಂತೆ ನಡೆಯದಿದ್ದರೆ ತಾನು ಸಾರಥ್ಯಮಾಡುವುದಿಲ್ಲವೆಂದು ಹಿಂದೆಯೇ ಹೇಳಿದ್ದನಷ್ಟೆ. ಅದರಂತೆ ಅಂಗರಾಜನಿಗೆ ಕಿನಿಸಿ ಮುಳಿಸಿನೊಳೆ, 'ಕಣ್ಗಾಣದಿಂತಪ್ಪ ಏಕಗ್ರಾಹಿಗಂ ಒರಂಟಂಗಂ ತೇರನೆಸಗೆಂ' ಎಂದು ರಥದಿಂದಿಳಿದು ಹೊರಟುಹೋದನು.

ಕರ್ಣನೇನೂ ಧೈರ್ಯಗೆಡಲಿಲ್ಲ; ಹೋಗಬೇಡವೆನ್ನಲಿಲ್ಲ; ಇನ್ನು ಮುಂದೆ ನೀನು ಹೇಳಿದಂತೆ ಕೇಳುವೆನೆನ್ನಲಿಲ್ಲ.

"ಅರಿಗನ ಬಟ್ಟಿನಂಬುಗಳ ಬಲ್ಸರಿ ಸೋಂಕುಗುಂ; ಏಟಿಂ; ಎನ್ನ ತೋಳ್ ನೆರಮೆನಗೆನ್ನ ಬಿಲ್ಲೆ ನೆರಂ" ಎಂದು ಮೊದಲಿಸಿ "ವರೂಥ ತುರಂಗಮಂಗಳಂ ತುರಿಪದೆ ತಾನೆ ಚೋದಿಸುತುಂ, ಆರ್ದಿಸಿತುಂ ಕಡುಕೆಯ್ದು" ಕಾದಿದನು.

ಆದರೆ ವಿಧಿಯು ಅವನನ್ನು ಅಡ್ಡಿಯಿಲ್ಲದೆ ಬಲುದೂರ ಹೋಗಗೊಡಲಿಲ್ಲ. ಪಾಪ! ಏಕಾಕಿಯಾಗಿ ಸಿಕ್ಕಿಕೊಂಡ ಕರ್ಣನ ರಥದ ಚಕ್ರವನ್ನು "ಮುನ್ನಂ ತನ್ನ ನೇಟ್ ನೂಲ್ವರಂ ಬಲ್ಲಣಿಗೆಯಂ ಪಿಡಿವಂತೆ ಪಿಂಡಿ ಪಿಡಿದ ಪಗೆಗೆ" ಭೂಮಿಯು ಹಿಡಿದು ನುಂಗಿದಳು. ಬಳಿಕ ರಥದಿಂದಿಳಿದು ಗಾಲಿಯನ್ನೆತ್ತುವಾಗ, ಕೃಷ್ಣನು ಅರ್ಜುನನನ್ನು ಕುರಿತು "ಇವನಂ ಈ ಪದದೊಳ್ ಕಡಿದೊಟ್ಟದಾಗಳ್ ಗೆಲಲಾಱೆ"ಯೆಂದು ಹೇಳಿದನು. ಅರ್ಜುನನಿಗೆ ಮನಸ್ಸು ಬರಲಿಲ್ಲ. ಅವನು ಹೇಳಿದುದೇನೆಂದರೆ :—

ಬಱಿವಂ, ಸಾರಥಿಯಿಲ್ಲ; ಮೆಯ್ಗೆ ಮಱೆಯುಂ ತಾನಿಲ್ಲದೆಂತೀಗಳಾ
ನಿಱಿವೆಂ? ನೋಡಿರೆ ಮತ್ತಮೊಂದನಿಸಲುಂ ಕೆಯ್ಯೇಟದೇಕೆಂದುಮಾ

ನಱಿಯೆಂ, ಕೂರ್ಮ್ಮೆಯೆ ಮಿಕ್ಕು ಬಂದಪುದಿದಕ್ಕೇಗೆಯ್ವೆನೇನೆಂಬೆನಾಂ
ಮಱೆದೆಂ ಮುನ್ನಿನದೊಂದು ವೈರಮನಿದಿಂತೇಕಾರಣಂ ಭೂಧರಾ ||

ಪಾಪ! ಕರ್ಣನಾರೆಂಬುದು ಅರ್ಜುನನಿಗೆ ತಿಳಿಯದು. ಆದರೆ ಅವನ ಕರುಳಿಗೆ ಗೊತ್ತು. ಇದ್ದಕ್ಕಿದ್ದ ಹಾಗೆ ಸ್ನೇಹ ಹೆಚ್ಚುತ್ತಿದೆ. ಏಕೋ ತಿಳಿಯದು, ಹೊಡೆಯಲು ಕೈಯೇ ಬಾರದು. ಹಿಂದಿನ ದ್ವೇಷವೆಲ್ಲವೂ ಮರೆತುಹೋಯಿತು. ಅದರ ಮೇಲೆ, ಕರ್ಣನು ಏಕಾಕಿ; ಸಾರಥಿಯಿಲ್ಲ; ಮೈಗೆ ಕವಚವಿಲ್ಲ; ಹೊಡೆಯುವುದು ಹೇಗೆ?

ಆಗ "ಎನಿತಱಿಯದಿರ್ದೊಡಂ ಸೋದರಿಕೆಯೆ ಮಿಕ್ಕು ಬರ್ಕುವಮಾಗದೆ" ಎಂದು ಯೋಚಿಸಿ ಕಪಟನಾಟಕಸೂತ್ರಧಾರನಾದ ಕೃಷ್ಣನು ಹೀಗೆಂದನು:—

ನೆಗಟ್ದಭಿಮನ್ಯುವಂ ಚಲದಿನಂದಿಱಿದಿಂದು ನಿಜಾಗ್ರಜಾತನಂ
ಸುಗಿವಿನಮೆಚ್ಚು ಬೀರದೊಳೆ ಬೀಗುವ ಸೂತಸುತಂಗೆ ನೀನುಮಾ
ಜಗೆ ಸೆಡೆದಿರ್ದೆಯಪ್ಪೊಡಿರು ಚಕ್ರನಿಘಾತದಿನಿಕ್ಕಿ ಬೀರಮು
ರ್ವಿಗೆ ಪಡಿಚಂದಮಾಗೆ ತಱಿದೊಟ್ಟಿ ಜಯಾಂಗನೆಗಾಣ್ಮನಾದಪೆಂ ||

ಅರ್ಜುನನಿಗೆ ಕೆಣಸರವನ್ನು ಹುಟ್ಟಿಸುವ ಮಾತಿದು. "ನೀನು ಈಗ ಹೊಡೆಯದಿದ್ದರೆ ನನ್ನ ಪ್ರತಿಜ್ಞೆಯನ್ನೂ ಮೀರಿ, ಚಕ್ರದಿಂದ ಅವನನ್ನು ಕೊಂದು, ಅರ್ಜುನನು ಹೇಡಿ, ಕರ್ಣನನ್ನು ಗೆಲಲಾರದೆ ಹೋದನು. ಕೊನೆಗೆ ಅವನ ಸಾರಥಿಯು ಅವನನ್ನು ಗೆದ್ದನೆಂಬ ಯಶಸ್ಸಿಗೆ ಪಾತ್ರನಾಗುವೆನು" ಎಂದನು. ಅರ್ಜುನನ ಮೇಲೆ ಈ ಮಾತಿನ ಪ್ರಭಾವವೇನಾಗುತ್ತಿತ್ತೊ! ಆದರೆ ಆ ವೇಳೆಗೆ ಕರ್ಣನೇ ರಥವನ್ನೆತ್ತಿ ಸಿದ್ಧನಾಗಿ ಮುಂದೆ ಬಂದಿದಿರಿಸಿದನು. ಕೃಷ್ಣನಿಗೂ ಅರ್ಜುನನಿಗೂ ಬೇಕಾದಷ್ಟು ಶರಹತಿಗಳಾದುವು. ಸೂರ್ಯಾಸ್ತವು ಸಮೀಪಿಸುತ್ತಿತ್ತು. ಕರ್ಣನು ಶ್ರಮಪಟ್ಟಿದ್ದರೂ ಅವನ ತೇಜವು ಮಾತ್ರ ಏರುತ್ತಿತ್ತು. ಅದರ ವರ್ಣನೆಯಿದು.

ಬೆಳಗುವ ಸೊರ್ದ್ದುಗಳ ಬೆಳಗ
ಗ್ಗಳಿಸುವವೋಲ್ ಪೋಪ ಪೊತ್ತುಱೊಳ್ ತೇಜಂ ಪ
ಜ್ಜಳಿಸೆ ತಟಿತಟಿಸಿ ತೊಳತೊಳ
ತೊಳಗಿದನಸ್ತಮಯ ಸಮಯದೊಳ್ ದಿನಪಸುತಂ ||

ಕರ್ಣನ ತೇಜಸ್ಸು ಹೆಚ್ಚುತ್ತಿದೆ; ಅರ್ಜುನನ 'ಬಿಲ್ಲಗೊಣೆ' ಹರಿದುಹೋಗಿದೆ; ಆಗ "ಕರ್ಣವಿಕೀರ್ಣನಿಶಿತಶರಹತಿಯಿಂದಮುಸುರಾಂತಕಂ ಕಟಿಯೆ ನೊಂದು"

ಕಸೆಯಂ ಬಿಟ್ಟುಱಿದಭಿಮಂ
ತ್ರಿಸಿ ಚಕ್ರಮನಸುರವೈರಿಯಿಡುವಾಗಳ್, ಬಾ
ರಿಸಿ, ಪೆಱಿತು ಗೊಣೆಯದಿಂದೇ
ಱಿಸಿ ಬಿಲ್ಲಂ ತ್ರಿಭುವನಂಗಳಲ್ಲಾಡುವಿನಂ ||

" ಅಖಿಳಭುವನಭವನ ಸಂಹಾರಕಮಪ್ಪಂಜಲಿಕಾಸ್ತ್ರಮಂ ಅಮೋಘಾಸ್ತ್ರಧನಂಜಯಂ ಆಕರ್ಣಾಂತಂಬರಂ ತೆಗೆದು, ಆಕರ್ಣಾಂತಂ ಮಾಡಲ್ಬಗೆದು ಕಂಧರ ಸಂಧಿಯಂ ನಿಟ್ಟಿಸಿ "

ಮುಳಿದೆಚ್ಚಾಗಳ್ ಮಹೋಗ್ರಪ್ರಳಯಶಿಖಿಶಿಖಾನೀಕಮಂ, ವಿಸ್ಫುಲಿಂಗಂ
ಗಳುಮಂ ಬೀಱುತ್ತುಮೌರ್ವಜ್ವಳನರುಚಿಯುಮಂ ತಾನೆ ತೋಱುತ್ತುಮಾಟಂ
ದಳರುತ್ತುಂ, ಬಂದು ಕೊಂಡಾಗಳೆ, ಗಗನತಳಂ ಪಾಯ್ದು ಕೆನ್ನೆತ್ತರಿಂದು
ಜ್ಜ್ವಳಿಸುತ್ತಿರ್ಪನ್ನೆಗಂ, ಬಿಟ್ಟುದು ಭರದೆ ಸಿಡಿಲ್ದತ್ತ ಕರ್ಣೋತ್ತಮಾಂಗಂ ||

ಕರ್ಣನ ಕೊರಳಿನಿಂದ ತಲೆಯು ಮಾತ್ರ ಬಿತ್ತು ; ಎದೆಯಿಂದಿನ್ನೂ ಬೀರವು ಹೋಗಲಿಲ್ಲ. " ತಲೆ ನೆಲದೊಳುರುಳ್ದೊಡೆ, ಲೋಕಕ್ಕೆಲ್ಲಮಗುಂದಲೆಯಾದ ಬೀರ ಮೆಸೆಯೆ, ಪ್ರಾಣಮೊಡಲಿಂದಂ ತೊಲಗೆಯುಂ ತೊಲಗದ ನನ್ನಿಯಸುದಾಹರಿಸುವಂತೆ ಪತ್ತೆಂಟು ಕೋಲನೆಚ್ಚು, ಅಟ್ಟೆಯುಂ ಕುಲಶೈಲಂ ಬೀಱ್ವಂತೆ ನೆಲನದಿರೆ ಬಿಟ್ಟುದು."

ಗುಣನಿಧಿಯಾದ ಕರ್ಣನು ಹೀಗೆ ಮಡಿದ ಮೇಲೆ ಆ ಗುಣಗಳ ಗತಿಯೇನು ? ಅವುಗಳನ್ನೇ ಆಶ್ರಯಿಸಿಕೊಂಡಿರುವ ಲಕ್ಷ್ಮಿಯೇನಾಗಬೇಕು ?

ಚಾಗದ, ನನ್ನಿಯ, ಕಲಿತನ
ದಾಗರಮೆನೆ ನೆಗಟ್ದ ಕರ್ಣನೊಡಲಿಂದೆಂತುಂ
ಪೋಗಲ್ಕಱಿಯದೆ ಸಿರಿ ಕರ
ಮಾಗಳ್ ಕರಿಕರ್ಣ ತಾಳಸಂಚಳೆಯಾದಳ್ ||

ಅಯ್ಯೋ ! ಬಡಪಾಯಿ ಲಕ್ಷ್ಮಿಯು ದಿಕ್ಕಿಲ್ಲದವಳಾದಳು. ಅವನ ದೇಹದಲ್ಲಿದ್ದ ತೇಜಸ್ಸು ಸಾಮಾನ್ಯವೆ ?

ಕುಡುಮಿಂಚಿನ ಸಿಡಿಲುರುಳಿಯೊ
ಳೊಡಂಬಡಂ ಪಡೆಯೆ ಕರ್ಣನೊಡಲಿಂದಾಗಳ್
ನಡೆ ನೋಡೆ ನೋಡೆ ದಿನಪನೊ
ಳೊಡಗೂಡಿದುದೊಂದು ಮೂರ್ತಿ ತೇಜೋರೂಪಂ ||

ತೇಜಸ್ಸು ಎಲ್ಲಿಂದ ಬಂದಿತ್ತೋ ಅಲ್ಲಿಗೇ ಹೋಗಿ ಸೇರಿತು.

ಇನ್ನು ಆ ಸೂರ್ಯನ ಅವಸ್ಥೆಯಂತೂ ಹೇಳುವ ಹಾಗೆಯೇ ಇಲ್ಲ.

ಪಱಿಯಿಗೆಯನುಡುಗಿ, ರಥಮಂ
ಪೆಱವನನೆಸಗಲ್ಕೆ ವೇೞ್ದು, ಸುತಶೋಕದ ಪೊಂ
ಪುೞಿಯೊಳ್ ಮೆಯ್ಯಱಿಯದೆ, ನೀ
ರೞಿವಂತೆಪೊಲಿಱಿದನಪರಜಳಧಿಗೆ ದಿನಪಂ ||

ಕಲಿತನವೂ ಚಾಗವೂ ರೂಪುಗೊಂಡಂತಿದ್ದ ನಚ್ಚಿನ ಮಗನು ಸತ್ತನು. ಈ ದುಃಖದಲ್ಲಿ ತನ್ನ ಧ್ವಜವು ಹಾರುತ್ತಿರಬಹುದೆ? ಅದಕ್ಕಾಗಿ ತನ್ನ ಬೆಳ್ಗದಿರ ಗುಡಿಯನ್ನು ಇಳುಹಿದನು. ತ್ರಿಣೇತ್ರನಲ್ಲಿ ಅಶ್ವಹೃದಯವನ್ನು ಕಲಿತು, ಮುರಾಂತಕನಿಗಿಂತಲೂ ಪ್ರವೀಣನೆನಿಸಿದ ಶಲ್ಯನು ಸಾರಥ್ಯವನ್ನು ಮಾಡುತ್ತಿರುವಾಗಲೇ ತನ್ನ ಮಗನ ಗತಿ ಹೀಗಾಯಿತು. ಹೀಗಿರಲು ಸಾರಥಿಯ ಸಾಮರ್ಥ್ಯವನ್ನು ಕಟ್ಟಿಕೊಂಡೇನು? ಯಾವನೋ ಒಬ್ಬನು ಇದ್ದರೆ ಸರಿ ಎಂದು ಹೆಳವನೆನಿಸಿದ ಅರುಣನನ್ನೇ ತೇರನ್ನು ನಡೆಸೆಂದನು. ಪುತ್ರಶೋಕದ ಅಂತಸ್ತಾಪವು ತಡೆಯುವುದಕ್ಕೆ ಆಗದಂತೆ ಕ್ಷಣಕ್ಷಣಕ್ಕೂ ಹೆಚ್ಚುತ್ತಿರಲು, ಮೈಮೇಲೆ ಪ್ರಜ್ಞೆಯಿಲ್ಲದೆ, ಬದುಕಿಗೆ ಬೇಸತ್ತು, ನೀರಿನಲ್ಲಾದರೂ ಮುಳುಗಿಕೊಳ್ಳುವುದು ಮೇಲೆಂದು ಯೋಚಿಸಿ, ಸೂರ್ಯನು ಕೊನೆಗೆ ಪಶ್ಚಿಮ ಸಮುದ್ರದಲ್ಲಿ ಮುಳುಗಿಯೇಬಿಟ್ಟನು.

ಕರ್ಣನಾದರೋ ಮಡಿದನು. ಆದರೆ ಅವನನ್ನು ಕೊಂದವನು ಒಬ್ಬನಲ್ಲ. ಕುಂತಿ, ಇಂದ್ರ, ಪರಶುರಾಮ, ಭೂದೇವಿ, ಕೃಷ್ಣ; ಕೊನೆಗೆ ಹೆಸರಿಗೆ ಅರ್ಜುನ. ಅವನು ಸತ್ತದ್ದು ಇಂದಲ್ಲ. ಅವನನ್ನು ಹೆತ್ತಾಗಲೇ ಕುಂತಿಯು ಅವನ ಸಾವಿನ ಬೀಜವನ್ನು ನೆಟ್ಟಳು. ಗಂಗೆಯಲ್ಲಿ ಬಿಸುಟು ಅದಕ್ಕೆ ನೀರೆರೆದು ಮೊಳೆಯಿಸಿದಳು. ಇಂದ್ರನಿಂದದು ಚಿಗುರಿತು. ರೇಣುಕಾನಂದನನಿಂದ ಬಲಿತು ಕೊಂಬುಗೊಂಡಿತು. ಮತ್ತೆ ಕುಂತಿಯು ಮಾಡಿದ ದೋಹದ ಕ್ರಿಯೆಯಿಂದ ಹೂಬಿಟ್ಟಿತು; ಭೂದೇವಿಯಿಂದ ಕಾಯಾಗಿ, ಕೃಷ್ಣನಿಂದ ಮಾಗಿ ಹಣ್ಣಾಯಿತು. ಕೊನೆಗೆ ಅದನ್ನು ಕಿತ್ತು ಊಡಿಸಿದವನು ಅರ್ಜುನನು.

ಹಾ! ಕರ್ಣ! ದುರ್ದೈವಿ! ನಿನಗಾಪ್ತರು ಒಬ್ಬರಾದರೂ ಇಲ್ಲದೇಹೋದರೆ? ಹೆತ್ತತಾಯಿ; ವಿದ್ಯೆ ಕಲಿಸಿದ ಗುರು, ಮೂಲೋಕದ ರಕ್ಷಕನೆನಿಸಿದ ಇಂದ್ರ, ವಿಶ್ವಂಭರೆಯೂ ಸರ್ವಂಸಹೆಯೂ ಆದ ಭೂದೇವಿ ಮತ್ತು ಒಡಹುಟ್ಟಿದ ತಮ್ಮ ಇವರೈವರೂ ನಿನ್ನ ಪ್ರಾಣಗಳನ್ನು ಹಂಚಿಕೊಂಡರೇ! ತೊಡೆಯಮೇಲೆ ತಲೆಯಿಟ್ಟು ಮಲಗಿರುವ ಗುರುವಿಗೆ ನಿದ್ರಾಭಂಗವಾದೀತೆಂದು ಹೆದರಿ, ತನ್ನ ನೋವನ್ನು ಸಹ ಲೆಕ್ಕಿಸದಿದ್ದ ಗುರುಭಕ್ತಿಗೆ ಪ್ರತಿಫಲವು ಗುರುವಿನ ಆಗ್ರಹವಲ್ಲವೆ! ಯಾಚಕರು ಬೇಡುವುದು ಹಣವನ್ನಲ್ಲ, ಪ್ರಾಣವನ್ನು! ಕರ್ಣಾ, ನೀನು ಸತ್ತು ಸಾಯಲಿಲ್ಲ; ಅರ್ಜುನನು ಗೆದ್ದು ಬದುಕಲಿಲ್ಲ. ನಶ್ವರವಾದ ಪಾರ್ಥಿವ ದೇಹವನ್ನು ನೀಗಿ, ಲಕ್ಷೋಪಲಕ್ಷ ದಿವ್ಯದೇಹಗಳನ್ನು ತಾಳಿ, ಸಹೃದಯರ ಹೃದಯ ಸಿಂಹಾಸನದಲ್ಲಿ ಆಚಂದ್ರಾರ್ಕವಾಗಿ ನೀನು ಬೆಳಗುತ್ತಿರುವೆ.

## ಉಪಸಂಹಾರ

ಕರ್ಣನ ಅಳಿವಿನೊಡನೆ ಭಾರತದ ಮುಡಿವು; ಏಕೆಂದರೆ, ಮುಂದಿನ ಸಂಗತಿಗಳನ್ನರಿಯಲು ಗ್ರಂಥವನ್ನೇ ಓದಬೇಕಾಗಿಲ್ಲ. ಅವೆಲ್ಲವೂ ಊಹೆಗೆ ಸಿಕ್ಕಿಹೋಗತಕ್ಕವು. ಮುಂದಿನ ಸಂಗತಿಗಳಾವುವು? ಕೌರವನ ಬೀಳು, ಹೆಂಗಸರ ಗೋಳು ಮತ್ತು ಪಾಂಡವರ ಬಾಳು. "ಒಡಲೆರಡೊಂದೆ ಜೀವ"ವೆನ್ನುತ್ತಿದ್ದ ದುರ್ಯೋಧನನು ಕರ್ಣನಳಿದ ಬಳಿಕ ಬದುಕಿರುವನೆಂಬುದು ಆಗದ ಮಾತು; ಆತ್ಮಹತ್ಯವು ವೀರನಿಗೆ ಸಲ್ಲದು. "ಮಹಾಸತ್ವನಪ್ಪುದಱಿಂ, ಅಂತರಂ ಯಮಸ್ಥಾನಮನೆಯ್ದಿಸುತ್ತೆ ಕೆಳೆಯನ ಬೆನ್ನನೆ ಪೋಪುದಲ್ಲದೆ" ಬೇರೆ ಹಾದಿಯಿಲ್ಲ. "ಕುರುಪತಿಗಿಲ್ಲ ದೈವಬಲಂ" ಆದುದರಿಂದ ಕಾಳಗದಲ್ಲಿ ಅವನಿಗೆ ಅಳಿವಲ್ಲದೆ ಗೆಲವೆಂತು? ಯಾರಿಂದ ಅಳಿವು? "ದುರ್ಯೋಧನನುಂ ಭೀಮಸೇನನೊಳೆ ನೆಣಸಿ ಗದೆಯಿಂ ಕಲ್ತವಂ;" ಅವರಿರ್ವರಿಗೂ "ಮನದೊಳೊಗೆದ ಅನ್ಯಜನ್ಮದ ಮುನಿಸದು" ಆದುದರಿಂದ ಭೀಮನ ಗದಾಹತಿಗೆ ದುರ್ಯೋಧನನು ತುತ್ತಾಗಬೇಕು. ಹೆಂಗಸರ ಗೋಳೂ, ಪಾಂಡವರ ಬಾಳೂ ಇದರ ಮುನ್ನಡಿಗಳೇ. ಹೀಗೆಂದು ನೆನೆದೇ ಪಂಪನೂ ಸಹ, ಶಲ್ಯ ದುರ್ಯೋಧನಾದಿಗಳ ರಣಶೌರ್ಯವು ಹೊರಗೆ ಬರುವುದಕ್ಕೆ ಮುಂಚೆಯೇ

> ನೆನೆಯದಿರಣ್ಣ, ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ
> ನೆನೆವೊಡೆ ಕರ್ಣನಂ ನೆನೆಯ, ಕರ್ಣನೊಳಾರ್ ದೊರೆ? ಕರ್ಣನೇಱು, ಕ
> ರ್ಣನ ಕಡು ನನ್ನಿ, ಕರ್ಣನಳವಂಕದ ಕರ್ಣನ ಚಾಗಮೆಂದು ಕ
> ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ ||

ಎಂದು ಕರ್ಣನ ಚರಮಶ್ಲೋಕವನ್ನು ಹಾಡಿ ಕಣ್ಣೀರ್ಗರೆದಿರುವನು.

> ಪಿಡಿದನೆ ಪುರಿಗಣೆಯನೆರ
> ಱ್ನಿಡಿದನೆ? ಬಳ್ಕಿದನೆ? ತಾನೆ ತನ್ನನೆ ಚಲಮಂ
> ಪಿಡಿದಟ್ಟಿದನೆಂದು ದೇವರ
> ಪಡೆ ಗಡಣದೆ ಪೊಗೞ್ದು ದಿನತನೂಜನ ಗಂಡಂ ||

ಎಂದು ಹೊಗಳಿ, ಅರ್ಜುನನೇನೂ ಕರ್ಣನನ್ನು ಕೊಲ್ಲಲಿಲ್ಲ. ಅವನು ತಾನೇ ಸತ್ತನು ಎಂದು ಹೇಳಿ ಭಾರತವೀರರಲ್ಲಿ ಕರ್ಣನಿಗೆ ಅಗ್ರತಾಂಬೂಲವನ್ನಿತ್ತಿರುವನು. "ಒಡಲುಂ ಪ್ರಾಣಮುಮೆಂಬಿವು ಕಿಡಲಾದುವು ಜಸಮದೊಂದೆ ಕಿಡದು. ಅದನವಂ . . . ಬಲ್ಪಿಡಿವಿಡಿದು" ನೆಗಟ್ದಂ.

ಭಾರತ ವೀರರಲ್ಲಿ ಕರ್ಣನಂತೆ ಧರ್ಮದ ಇಕ್ಕಿಳದಲ್ಲಿ ನೊಂದು, ದೈವದ ಮುನಿಸಿನ ಕಿಚ್ಚಿನಲ್ಲಿ ಬೆಂದವರು ಇನ್ನಾರೂ ಇಲ್ಲ. ಇವನ ಬಾಳ್ಮೆಯಲ್ಲೆಲ್ಲ ಇವು

ತೋರಿಬರುತ್ತಿವೆ. ಕೌರವನೊಬ್ಬನನ್ನು ಬಿಟ್ಟರೆ, ಇವನಿಗೆ ನಿಜವಾಗಿ ಅಯ್ಯೋ ಎನ್ನುವವರಿಲ್ಲ. ಯಾರಾದರೂ ಅಂತಹವರೊಬ್ಬರು ಬಂದರೋ ಅಲ್ಲಿಗೆ ವಿಧಿಯು ಅಡ್ಡಲಾಗಿ ಬರುತ್ತದೆ. ಇವನು ಹಿಡಿದರೆ ಹೊನ್ನು ಮಣ್ಣು. ಮುಡಿದರೆ ಹೂವಿನ ಮಾಲೆಯು ಕೆರಳಿದ ಹಾವು. ಅಡಿಯಿಟ್ಟರೆ, ನೆಲವೇ ಮುನಿಯುವುದು. ಆದರೂ ಅವನದು ಕೆಚ್ಚೆದೆ.

ವಿ. ಶ್ರೀರಂಗಾಚಾರ್.

---

# ಉದಯನ ಚರಿತ್ರ ಸಂಗ್ರಹ

## ಐದನೆಯ ನರವಾಹನಕಾಂಡ

ಬಳಿಕ ಒಂದು ದಿನ ಮಂತ್ರಿಗಳೊಡನೆ ಉದಯನನು ದೊಡ್ಡ ಆಸ್ಥಾನದಲ್ಲಿ ಹೋಗಿ ಮಂಡಿಸಿದ್ದನು. ಆಗ ತಕ್ಕ ನಡವಳಿಕೆಯುಳ್ಳ ವರ್ತಕರು ಕೆಲವರು ಹತ್ತಿರ ಬಂದು ಕ್ರಮಪ್ರಕಾರವಾಗಿಯೇ ಹೋಗಿ ತಮಗಿದ್ದ ವ್ಯವಹಾರವೊಂದನ್ನು ಉದಯನ ನಿಗೆ ತಿಳಿಸಿದರು. ಅದನ್ನು ತೀರಿಸುವಂತೆ ರುಮಣ್ವಂತನಿಗೆ ಅವನು ಕಟ್ಟಳೆಯಿಡಲು, ಅವನು ಅದನ್ನು ಚೆನ್ನಾಗಿ ವಿಚಾರಿಸಿ ತೀರ್ಪು ಹೇಳಿಬಿಟ್ಟು ಹಿಂದಕ್ಕೆ ಬಂದು ಆ ವಿವರವನ್ನು ಉದಯನನ ಬಳಿ ಹೇಳಿದನು; [1]ಆ ವ್ಯವಹಾರ ಸಂತತಿಯಿಲ್ಲದ್ದರಿಂದ ಉಂಟಾಗುವ ಕೊರತೆಯನ್ನೂ ಅದು ಇರುವುದರಿಂದ ಉಂಟಾಗುವ ಪೆರ್ಮೆಯನ್ನೂ ತಿಳಿಯಪಡಿಸುವುದಾದ್ದರಿಂದ ಉದಯನನು "ನಮಗೆ ಸಂತಿ ಇಲ್ಲವಲ್ಲಾ; ಮಕ್ಕಳಿಲ್ಲ ವೆಂದರೆ ಬಹಳ ಮೇಲಾದ ಮಹಿಮೆಯುಳ್ಳ ನಮ್ಮ ಕುಲ ನಡುವೆ ಕತ್ತರಿಸಿಹೋಗು ವುದಲ್ಲಾ" ಎಂಬ ವ್ಯಥೆಯನ್ನು ಪಡೆದು ವಾಸವದತ್ತೆಯ ಬಳಿ ಹೋದನು.

ಆವೊತ್ತು ಅವಳು ನೋಂಪಿನೋಂತವರಿಗೆಲ್ಲ ಉಣವುಕೊಟ್ಟು ಅವರುಗಳ ಆಶೀರ್ವಾದವನ್ನು ಪಡೆದು ಮಂಗಳವೇಷದಿಂದ ಮಾಡದ ಒಂದೆಡೆಯಲ್ಲಿ ಇದ್ದಳು; ಇರುವಾಗ ಒಂದು ಪಾರಿವಾಳ ತಾನು ಬಾಯ್ತೊಂಡಿದ್ದ ಅರುಮೆಯೆರೆಯನ್ನು ತನ್ನ ಮರಿಯ ಬಾಯಲ್ಲಿ ಸುರಿದದ್ದನ್ನು ಕಂಡು ಮರಿಯ ಹಸಿವಿನ ಸಂಕಟವನ್ನೂ ತಾಯಿ ಪಾರಿವಾಳದ ಪ್ರೀತಿಯ ಹೆಚ್ಚಿಗೆಯನ್ನೂ ನೋಡಿ, ಅದರ ಪ್ರೀತಿಯನ್ನು ಕೊಂಡಾಡು ತ್ತಿದ್ದುದನ್ನು ಕೇಳಿ ತಿಳಿದುಕೊಂಡು, ಬಾಯಾರಿದವರಿಗೆ ತಣ್ಣೀರನ್ನು ಹೋಲುವ ಅವಳೊಡನೆ ಮಲಗಿದನು.

ಆಗ ನಡುವಣ ಜಾವದಲ್ಲಿ ಒಬ್ಬ ದೇವತಾಸ್ತ್ರೀ ಬಂದು, "ನಮ್ಮೆರೆಯನಾಗಿ ರುವ ಕುಬೇರನು ನಿಮ್ಮನ್ನು ಕರೆಯುತ್ತಾನೆ, ಬನ್ನಿ" ಎಂದಳು. ಉದಯನನು "ವಾಸವದತ್ತೆಯನ್ನೂ ಒಡನೆ ಕರೆದುಕೊಂಡು ಬರಲು ನನ್ನ ಮನಸ್ಸು ಬಯಸು ತ್ತಿರುವುದು; ಅದನ್ನು ನೀನು ಅಂಗೀಕರಿಸಬೇಕು" ಎಂದನು. ಒಡನೆ ಅವಳು ಇಬ್ಬರನ್ನೂ ಕೈಯ್ಯಲ್ಲಿ ಎತ್ತಿಕೊಂಡು ಹಾರಿಹೋಗಿ ಕುಬೇರನ ಬಳಿಸಾರಲು,

---

[1] ಒಂದು ವ್ಯವಹಾರವನ್ನು ತೀರಿಸಿದ್ದರಿಂದ ತನಗೆ ಸಂತತಿಯಿಲ್ಲವಲ್ಲಾ ಎಂಬ ಸಂಕಟ ದುಷ್ಯಂತನಿಗೆ ಉಂಟಾದದ್ದಾಗಿ ಶಾಕುಂತಲದಲ್ಲಿ ೬ನೆಯ ಅಂಕದಲ್ಲಿ ತಿಳಿಯಬರುವುದು.

ಅವನು ಸಿಂಹಾಸನವೊಂದನ್ನು ತೋರಿಸಿ ಅದರಲ್ಲಿ ಕೂತುಕೊಳ್ಳುವಂತೆ ಹೇಳಲು, ಉದಯನನು ದೇವಿಯೊಡನೆ ಅದರಲ್ಲಿ ಕೂತಿದ್ದಾಗ, ಕುಬೇರನ ಕಟ್ಟಳೆಯ ಪ್ರಕಾರ ಒಂದು ಮಣಿಮುಡಿಯನ್ನು ಆ ದೇವಸ್ತ್ರೀ ತಂದು ಉದಯನನಿಗೆ ಕೊಡಲು, ಅವನು ತೆಗೆದುಕೊಂಡು ವಾಸವದತ್ತೆಯೊಡನೆ ನಗರಕ್ಕೆ ಬಂದು ಅದನ್ನು ಅವಳಿಗೆ ಕೊಡಲು, ಅವಳು ಅದನ್ನು ತನ್ನ ಎದೆಯಲ್ಲಿ ಸೇರಿಸಿದಳು. ಒಡನೆ ಅದು ಸೂರ್ಯನ ಹಾಗೆ ತೋರಿ ಅವಳ ಬಸಿರಿನಲ್ಲಿ ಹೊಕ್ಕುಬಿಡಲು ಅವಳು ಅಂಜಿ ದಿಢೀರೆಂದು ಎದ್ದಳು; ತಾನೂ ಒಡನೆ ಎದ್ದುಬಿಟ್ಟದ್ದಾಗಿ ಅವನು ಕನಸೊಂದನ್ನು ಕಂಡು ಒಬ್ಬ ಮುನಿಗಳ ಬಳಿ ಹೋಗಿ ತಾನು ಕಂಡ ಕನಸನ್ನು ಹೇಳಿ ಅದರ ಫಲವನ್ನು ಹೇಳಬೇಕೆಂದು ಕೇಳಲು ಅವರು, "ಬೆಳ್ಳಿಮಲೆಯನ್ನು ಆಳುವ ಚಕ್ರವರ್ತಿಯಾದ ಒಬ್ಬ ಮಗನನ್ನು ನೀನು ಪಡೆಯುವೆ; ಅವನು ಜಯಪಡೆದು ಬೆಳಗುವನು; ಸ್ವಲ್ಪವೂ ಸಂದೇಹವಿಲ್ಲ" ಎಂದರು. ಉದಯನನು ಕೇಳಿ ಅದನ್ನು ವಾಸವದತ್ತೆಗೆ ಹೇಳಿ ಸಂತೋಷಗೊಂಡು ಇದ್ದನು.

ಹೀಗಿರುವಲ್ಲಿ ವಾಸವದತ್ತೆ ಗರ್ಭತಾಳಿದಳು. ಅದಕ್ಕೆ ತಕ್ಕ ಲಕ್ಷಣಗಳು ಅವಳ ದೇಹದಲ್ಲಿ ಕಂಡುಬಂದವು; ಬಯಕೆ ನುಂಕಟಪಡೆದು ವ್ಯಥೆಪಟ್ಟಳು; ಒಂದುದಿನ ಒಳಲಿ ಮಲಗಿರುವಲ್ಲಿ, ಬೆಳಗು ಮುಂಜಾವದಲ್ಲಿ ಆಕಾಶದಲ್ಲಿ ಹೋಗುವ ಬಿಳಿಯಾನೆ ಯೊಂದು ಬಂದು ಸೊಂಡಿಲನ್ನು ಸುರುಟಿಕೊಂಡು ತನ್ನ ಹೊಟ್ಟೆಯಲ್ಲಿ ಹೊಕ್ಕದ್ದಾಗಿಯೂ ಆಗ ಆಕಾಶದಲ್ಲಿ ದುಂದುಭಿಗಳು ಮೊಳಗಲು ಹಲವರು ಸ್ತುತಿಸಿದ್ದಾಗಿಯೂ ಬಳಿಕ ಅದನ್ನು ಉಗುಳಿಬಿಡಲು ರೆಕ್ಕೆಗಳನ್ನು ಪಡೆದು ಅದು ಹಾರಿಹೋಗಿ ಒಂದು ಬೆಳ್ಳಿಮಲೆಯ ಮೇಲೇರಿ ಅದರಲ್ಲಿ ಬೆಳಗುವ ಒಂದು ಸೂರ್ಯನನ್ನು ನುಂಗಿದ್ದಾಗಿಯೂ ಅವಳು ಕನಸೊಂದನ್ನು ಕಂಡು ದಿಢೀರೆಂದು ಅಂಜಿ ಎದ್ದಳು.

ಬಳಿಕ ಅವಳು ಅದನ್ನು ಉದಯನನಿಗೆ ಹೇಳಲು ಅವನು, "ವಿದ್ಯಾಧರರ ಲೋಕದಲ್ಲಿ ಹೋಗಿ ದೊಡ್ಡಹಗೆಯೊಬ್ಬನನ್ನು ಗೆದ್ದು ಅಲ್ಲಿ ಚಕ್ರವನ್ನು ನಡಸುವ ಒಬ್ಬ ಮಗನನ್ನು ನೀನು ಹೆರುವೆ" ಎಂದು ಹೇಳಿದನು.

ವಾಸವದತ್ತೆಯ ಗರ್ಭದಲ್ಲಿದ್ದ ಮಗುವಿನ ಬಳಿ ಶ್ರೇಷ್ಠವಾದ ವಿದ್ಯೆಯೊಂದು ಇದ್ದುದ್ದರಿಂದ, ಮೇಲೆ ಹಾರಿಹೋಗಿ ಮಲೆಗಳನ್ನೂ ಜೀರೆಯುವನ್ನೂ ನೋಡಬೇಕೆಂಬ ಎಣಿಕೆ ಅದಕ್ಕೆ ಉಂಟಾಯಿತು; ಬಯಕೆಯನ್ನು ವಾಸವದತ್ತೆಯೂ ಪಡೆದಳು; ಆಗ ಗರ್ಭದ ಬೆಳವಣಿಗೆಯಿಂದ ಅವಳ ದೇಹ ಆಯಾಸಗೊಂಡಿತು; ಅದನ್ನು ಕಂಡ ಉದಯನನು, "ನಿನಗೆ ಬೇಕಾದ್ದು ಯಾವುದು?" ಎಂದು ಕೇಳಿದನು. ತಾನು ಬಯಸಿರುವುದು ಸಿಕ್ಕುವುದಕ್ಕೆ ಅರಿದಾದ್ದರಿಂದ, ತನ್ನ ಎಣಿಕೆಯನ್ನು ಹೊರಪಡಿಸದೆ

ಇದ್ದಳು. ಅವನು, "ನೀನು ಏನನ್ನು ಬಯಸಿದರೂ ಅವನ್ನು ಕೊಡುವ ಹೊಣೆ ನನ್ನದು; ಸಂದೇಹಪಡಬೇಡ." ಎಂದು ಪ್ರತಿಜ್ಞೆಗೈದು ಒತ್ತಾಯಮಾಡಿ ಕೇಳಲು, ಅವಳು, "ವಿದ್ಯಾಧರರುಗಳ ಹಾಗೆ ಆಕಾಶದಲ್ಲಿ ಹಾರಿಹೋಗಿ ಹಲವೆಡೆಗಳನ್ನೂ ನೋಡುವುದಕ್ಕೆ ನನ್ನ ಮನಸ್ಸು ಬಯಸುತ್ತಿದೆ" ಎಂಬುದನ್ನು ಅಂಜಿ ತಿಳಿಸಿದಳು. ಅವಳ ಬಯಕೆಯನ್ನು ತೀರಿಸುವುದಕ್ಕೆ ತಕ್ಕ ಆಲೋಚನೆಗಳನ್ನು ಮಂತ್ರಿಗಳೊಡನೆ ಅವನು ಮಾಡುವವನಾದನು.

ಹಾಗೆ ಆರಯ್ದುಕೊಂಡಿರುವಲ್ಲಿ, ಲಾವಣಕನಗರದಲ್ಲಿ ಇರುತ್ತಿದ್ದ ರುಮಣ್ವಂತನಿಗೆ ವಾಸವದತ್ತೆಯ ಅಭಿಪ್ರಾಯ ಇಂಥದೆಂಬುದನ್ನೂ ಅದನ್ನು ತಡೆಯುವುದಕ್ಕೆ ಮಾಡುವ ಉಪಾಯವನ್ನು ತಾನು ಹುಡುಕುತ್ತಿರುವುದನ್ನೂ ಉದಯನನು ತಿಳಿಸಲು, ಅವನು, "ಹಿಂದೊಂದು ಕಾಲದಲ್ಲಿ ಬಂದು ನಮ್ಮ ದಾಹವನ್ನು ಹೋಗಿಸಿದ ಯಕ್ಷನನ್ನು ನೆನೆವೆವಾದರೆ ಅವನು ಬಂದು ನಮ್ಮ ಇಷ್ಟವನ್ನು ನೆರವೇರಿಸುವನು" ಎಂದು ಅವನನ್ನು ಧ್ಯಾನಿಸುವುದಕ್ಕೆ ತಕ್ಕ ಮಂತ್ರವನ್ನು ಬರೆದುಕೊಟ್ಟನು.

ಉದಯನನು ಅದನ್ನರಿತು ಪರಿಶುದ್ಧತೆಯಿಂದಲೂ ವ್ರತದಿಂದಲೂ ಇದ್ದು ಮನಸ್ಸನ್ನು ಒಂದುಪಡಿಸಿ ಆ ಮಂತ್ರವನ್ನು ಓದಿಕೊಂಡಿದ್ದ ಕಾಲದಲ್ಲಿ ಆ ಯಕ್ಷನು ಬಾನಿನಿಂದ ಎರಗಿ ಅಲ್ಲಿ ಬಂದು ಅವನ ಮುಂದೆ ನಿಂತನು.

ಆ ಯಕ್ಷನು ಉದಯನನನ್ನು ಕುರಿತು, "ಮಾಯದಾನೆಯನ್ನು ಹಿಡಿಯುವುದಕ್ಕೆ ಹೋಗಿ ಸೆರೆಪಟ್ಟಾಗಲೂ, ಬೇಡರುಗಳೆಡೆಯಲ್ಲಿ ಸಿಕ್ಕಿಬಿದ್ದಾಗಲೂ, ಮಗಧನಾಡಿನಲ್ಲಿ ತೊಂದರೆಯುಂಟಾದಾಗಲೂ ಆರುಣಿಯೊಡನೆ ಯುದ್ಧಮಾಡಿದಾಗಲೂ ನನ್ನನ್ನು ನೆನೆಯದೆ ಮಿಗಿಲುಸಂಪತ್ತಿನಿಂದ ಸುಖಪಟ್ಟಿರುವ ನೀನು ಈ ಕಾಲದಲ್ಲಿ ನೆನೆಯುವುದಕ್ಕೆ ಕಾರಣ ಯಾವುದು?" ಎಂದು ಕೇಳಿದನು.

ಉದಯನನು, "ಆ ದುಃಖಗಳೆಲ್ಲ ನಾವೇ ತೀರಿಸಲು ತಕ್ಕವಾಗಿ ಇದ್ದದ್ದರಿಂದ ನೆನೆಯಲಿಲ್ಲ; ನಮ್ಮಿಂದ ಮಾಡಲಾಗದುದನ್ನು ಬಯಸಿರುವ ವಾಸವದತ್ತೆಯ ಬಯಕೆಯನ್ನು ಪೂರ್ತಿಮಾಡಿಸಬೇಕಾಗಿ ಇರುವುದರಿಂದ ಈಗ ನೆನೆದೆನು" ಎಂದನು. ಎನ್ನಲು ಆ ಯಕ್ಷನು, "ನಿನ್ನ ದೇವಿಯ ಬಸಿರಿನಲ್ಲಿರುವವನು ವಿದ್ಯಾಧರ ಚಕ್ರವರ್ತಿಯಾಗತಕ್ಕವನು; ಅದಕ್ಕೆ ತಕ್ಕ ಕಾರಣವನ್ನು ಕೇಳುವವನಾಗು: ವಿಂಧ್ಯಮಲೆಯನ್ನು ಸಾರಿದ ನರ್ಮದಾ ನದಿಯ ಬಂದು ದಡದಲ್ಲಿರುವ "ಪರ್ವತ"ವೆಂಬ ಮಲೆಯಮೇಲೆ ಕುಬೇರನು ತನ್ನ ಅಂತಃಪುರದ ಹೆಂಗಸರೊಡನೆ ಇದ್ದ ಕಾಲದಲ್ಲಿ, ಭದ್ರೆ ಮೊದಲಾದ ದೇವಸ್ತ್ರೀಯರು ಎಂಬತ್ತು ಜನರಲ್ಲಿ ಒಬ್ಬಳಾದ ಭದ್ರಾವತಿಯೆಂಬವಳನ್ನು ತಳಿರು ಮೊದಲಾದುವನ್ನು ಕೊಯ್ದುಕೊಂಡು ಬರುವಂತೆ ಅವನು ಹೊರಕ್ಕೆ ಕಳಿಸಿದನು;

ಹೋದ ಭದ್ರಾವತಿ ಹಾಗೆ ಕೊಯ್ದು ತಳಿರು ಮೊದಲಾದುವನ್ನು ಕೈಯಲ್ಲಿ ಎತ್ತಿ ಕೊಂಡು ನಿಂತು ಒಂದು ಗಂಡಾನೆಯಿಂದ ತಬ್ಬಲ್ಪಟ್ಟು ನಿಂತ ಹೆಣ್ಣಾನೆಯನ್ನು ನೋಡಿ, 'ಆನೆಯ ಜನ್ಮವೂ ಬಯಸತಕ್ಕದ್ದು' ಎಂದು ಎಣಿಸಿಕೊಂಡು ಕುಬೇರನ ಬಳಿ ಬಂದು ಸೇರಿದಳು. ಅವಳ ಎಣಿಕೆಯನ್ನು ಅರಿತ ಕುಬೇರನು ಅವಳನ್ನು ಕುರಿತು 'ದೇವಸುಖವನ್ನು ಬಯಸದೆ ಆನೆಯ ಸುಖವನ್ನೆ ದೊಡ್ಡದಾಗಿ ನೆಸೆದದ್ದರಿಂದ ಮಣ್ಣುಲೋಕಕ್ಕೆ ಹೋಗಿ ಹೆಣ್ಣಾನೆಯಾಗಿ ಹುಟ್ಟಿ ನೀನು ಬಯಸಿದಂತೆ ಗಂಡಾನೆ ಯೊಡನೆ ಆಟವಾಡಿ ಭೋಗವನ್ನು ಅನುಭವಿಸುವವಳಾಗು ಎಂದು ಶಾಪಕೊಟ್ಟನು. ಒಡನೆ ಅವಳು ನಡುನಡುಗಿ, "ಆ ಜನ್ಮದಿಂದ ನಾನು ತೊಲಗಿ ಬರುವುದು ಯಾವಾಗ?" ಎಂದು ಕೇಳಿದಳು. ಅವಳಿಗೆ, "ನೀನು ಪ್ರದ್ಯೋತನನ ನಗರದಲ್ಲಿ ಒಂದು ಹೆಣ್ಣಾನೆ ಯಾಗಿ ಹುಟ್ಟಿ ಈ ಹೆಸರನ್ನೇ ಪಡೆದು ಬೆಳೆದು ಬಾಳುವ ಕಾಲದಲ್ಲಿ ಆ ಅರಸನಿಂದ ಉದಯನನಿಗೆ ಕೊಡಲ್ಪಡುವೆ. ಅವನು ವಾಸವದತ್ತೆಯನ್ನು ನಿನ್ನ ಮೇಲೆ ಏರಿಸಿ ಕೊಂಡು ಇರುಳಿನಲ್ಲಿ ಹೋಗುವಾಗ ನೀನು ನಿಡುದೂರ ಹೋಗಿ ಕಾಲಕೂಟವೆಂಬ ರೋಗದಿಂದಲೂ ಮಿಗಿಲು ಹಸಿವಿನಿಂದಲೂ ಬೀಳುವೆ. ಬಿದ್ದೊಡನೆ ಉದಯನನು ಪಂಚಮಂತ್ರವನ್ನು ನಿನ್ನ ಕಿವಿಯಲ್ಲಿ ಉಪದೇಶಿಸುವನು. ಆ ಉಪದೇಶವನ್ನು ಪಡೆದು ನೀನು ಹುಟ್ಟನ್ನುಳಿದು ದೇವರೂಪವನ್ನು ಕೊಂಡು ಇಲ್ಲಿಗೆ ಬರುವೆ" ಎಂದು ಕುಬೇರನು ಹೇಳಿದನು. ಹಾಗೆಯೇ ನಡೆದದ್ದರಿಂದ ಅವಳು, ನಿನಗೆ ಒಂದು ಪ್ರತ್ಯುಪ ಕಾರವನ್ನು ಮಾಡಬೇಕೆನಿಸಿ ಅದಕ್ಕೆ ತಕ್ಕ ಉಪಾಯವನ್ನು ಹುಡುಕಿ ಕುಬೇರನನ್ನು ಬಳಿಸಾರಿ ನಮಸ್ಕರಿಸಿ, ನನಗೆ 'ಒಂದು ಸಣ್ಣ ವರವನ್ನು ಕೊಟ್ಟು ಕರುಣಿಸಬೇಕು' ಎಂದು ಕೇಳಿದಳು. ಕೇಳಲು ಕುಬೇರನು, 'ನೀನು ಬಯಸಿರುವುದನ್ನು ಮರೆಮಾಡದೆ ಹೇಳು' ಎಂದು ಕಟ್ಟಳೆಯಿಟ್ಟನು. ಆಗ ಅವಳು, ನಾನು ಪ್ರದ್ಯೋತನನ ನಾಡಿನ ಎಲ್ಲೆಯವರೆಗೆ ಹೊತ್ತುಕೊಂಡು ಹೋಗಿ ಬಿದ್ದ ಒಡನೆ ತನ್ನ ಕೆಲಸ ಮುಗಿದು ಬಿಟ್ಟಿತೆಂದು ನೆನೆಯದೆ ನನ್ನ ಬಳಿ ಬಂದು ನಾನು ಮಾಡಿದ ಸಹಾಯವನ್ನು ಮಿಗಿ ಲಾಗಿ ಕೊಂಡಾಡಿ ಕಣ್ಣೀರು ಸುರಿಸಿ ನನ್ನೊಡಲನ್ನು ಸವರಿ ನಾನು ದೇವ ಜನ್ಮವನ್ನು ಪಡೆದು ಸುಖಹೊಂದಿ ಬಾಳುವಂತೆ ಪಂಚಮಂತ್ರವನ್ನು ನನ್ನ ಕಿವಿಯಲ್ಲಿ ಉಪದೇಶಿಸಿ ಉದಯನನು ತನ್ನ ಕಡವನ್ನು ತೀರಿಸಿದನು. ಅವನಿಗೆ ಒಬ್ಬ ಮಗ ನುಂಟಾಗುವಂತೆ ಕೃಪೆಮಾಡುವಂತೆ ಬೇಡುವೆನು' ಎಂದು ಕೇಳಲು ಕುಬೇರನು, ಆ ವರವನ್ನು ಅವಳಿಗೆ ಕೊಟ್ಟುಬಿಟ್ಟು ಬಾನ್‌ಲೋಕದಲ್ಲುಳ್ಳ ಸೌಧರ್ಮೇಂದ್ರನನ್ನು ಬಳಿ ಸಾರಿ ನಿನ್ನ ಪೆರ್ಮೆ ಮೊದಲಾದುವನ್ನು ಅವನಿಗೆ ಹೇಳಿ, 'ಉದಯನನಿಗೆ ಸಂತೋಷ ಕೊಡತಕ್ಕ ಒಬ್ಬ ಮಗ ಹುಟ್ಟಬೇಕು' ಎಂದು ಹೇಳಿದನು; ಸೌಧರ್ಮೇಂದ್ರನು,

'ಬೆಳ್ಳಿಯ ಪರ್ವತಲೆಯಲ್ಲಿ ಚಕ್ರವರ್ತಿಯಾಗಿ ಇರಬೇಕೆಂಬ ಬಯಕೆಯಿಂದ ಶೋದವನೆಂಬ ಮುನಿಯೊರ್ವನು ತಪಸ್ಸು ಮಾಡಿಕೊಂಡಿದ್ದಾನೆ. ಅವನು ಉದಯನನಿಗೆ ಪುತ್ರನಾಗಿ ಹುಟ್ಟಿ ವಿದ್ಯಾಧರ ಚಕ್ರವರ್ತಿಯಾಗಿ ಅರಸಾಳ್ಕೆ ಮಾಡಿಬಿಟ್ಟು ನನ್ನ ಬಳಿ ಬರುವನು' ಎಂದು ಉತ್ತರಕೊಟ್ಟು ಅವನನ್ನು ಬರಿಸಿ, 'ನೀನು ವಾಸವದತ್ತೆಯ ಬಸಿರಿನಲ್ಲಿ ತಂಗಿ ಹುಟ್ಟುವವನಾಗು,' ಎಂದು ಕಟ್ಟಳೆಯಿಟ್ಟನು. ಆದ್ದರಿಂದ, ನಿನಗೆ ಶ್ರೇಷ್ಠನಾದ ಕುಮಾರನು ಉಂಟಾಗುವುದು ತಪ್ಪದು. ಆ ಭದ್ರಾವತಿ ನಿನಗೆ ಇನ್ನೂ ಯಾವುದಾದರೊಂದು ಸಹಾಯ ಮಾಡಬೇಕೆಂಬ ಅಪೇಕ್ಷೆಯಿಂದ ಇದ್ದಾಳೆ. ಅವಳನ್ನು ನೆನೆದರೆ ಬಂದು ನಿನ್ನ ಕೊರತೆಯನ್ನು ಅವಳು ತೀರಿಸುವಳು. ಹಾಗೆ ತೀರಿಸಳಾದರೆ, ನಾನು ತಿರುಗಿಯೂ ಬಂದು ತೀರಿಸುವೆನು'' ಎಂದು ಹೇಳಿ ಭದ್ರಾವತಿಯನ್ನು ಕರೆಯುದಕ್ಕೆ ತಕ್ಕ ಮಂತ್ರವೊಂದನ್ನು ಉಪದೇಶಿಸಿಬಿಟ್ಟು ಹಲವು ಉಪಚಾರ ನುಡಿಗಳಿಂದ ಉದಯನನ್ನು ಕೊಂಡಾಡಿ ತಬ್ಬಿ ಬೀಳ್ಕೊಂಡು ತನ್ನೆಡೆಗೆ ಹೋದನು. ಆ ಮೇಲೆ ಉದಯನನು ಆ ಮಂತ್ರವನ್ನು ಓದಿ ಜಪಿಸುತ್ತಿದ್ದನು.

ಬಳಿಕ, "ವಾಸವದತ್ತೆಯ ಬಯಕೆಯನ್ನು ತೀರಿಸಲು ಉಪಾಯ ಯಾವುದು?' ಎಂದು ಹುಡುಕಿ ಅವನು ಹಲವೆಡೆಗಳಿಂದಲೂ ಬಡಗಿಗಳನ್ನು ಬರಮಾಡಿ, "ವಾಸವದತ್ತೆ ಏರಿ ಆಕಾಶಮಾರ್ಗದಲ್ಲಿ ಹೋಗಿ ಹಲವೆಡೆಗಳನ್ನೂ ನೋಡಿ ಬರುವುದಕ್ಕೆ ತಕ್ಕ ಯಂತ್ರವಿಮಾನವೊಂದನ್ನು ಮಾಡಿರಿ" ಎಂದು ಹೇಳಿದಾಗ ಅವರುಗಳು, "ನಮ್ಮಿಂದ ಆ ವಿಮಾನವನ್ನು ಮಾಡುವುದಕ್ಕೆ ಅರಿದು" ಎಂದರು.

ಅದನ್ನು ಅರಿತ ಭದ್ರಾವತಿ, "ನಾವೇ ಬಡಗಿಯ ರೂಪುಗೊಂಡು ಹೋಗಿ ಈ ಕಾರ್ಯವನ್ನು ಮುಗಿಸುವೆವು" ಎಂದು ನೆನೆದು ಒಬ್ಬ ಬಡಗಿಕೆಲಸದ ಎಳೆಯನ ಹಾಗೆಯೇ ಅಲ್ಲಿ ಬಂದು ರುಮಣ್ವಂತನಿಂದ ಅರಸನ ಬಳಿ ಹೋಗಿ, "ಈ ಬಡಗಿಗಳು ಅದನ್ನು ಮಾಡಲರಿಯರು; ನಾನು ಅದನ್ನು ಸುಲಭವಾಗಿ ಮಾಡುವೆನು" ಎಂದು ತಿಳಿಸಿದಳು.

ಅರಸನು ಒಡಂಬಟ್ಟು ಅದಕ್ಕೆ ಬೇಕಾದುವನ್ನು ಕೊಡಲು, ಅವನ್ನು ತೆಗೆದುಕೊಂಡು ಹೋಗಿ ಕೆಲವು ದಿನದಲ್ಲಿ ಭದ್ರಾವತಿ ಯಂತ್ರವಿಮಾನವೊಂದನ್ನು ಮಾಡಿ ಮುಗಿಸಿ ಬಂದು ಅರಸನಿಗೆ ತಿಳಿಸಿದಳು.

ಉದಯನನು ಹೋಗಿ ಅದನ್ನು ಕಂಡು ಉಮೆಯೊಡನೆ ಸೇರಿದ ಎವೆಯಿಕ್ಕದ ನೋಟದ ಕಣ್ಣಿನಲ್ಲಿ ದಿವ್ಯವಾಗಿ ಪ್ರಕಾಶಿಸುವ ಕಾಂತಿಯುಳ್ಳ ದೇವನನ್ನು ಹೋಲಿ ವಾಸದತ್ತೆಯೊಡನೆ ಅದರಲ್ಲಿ ಏರಿಕೂತು ಬೆಳಗಿದನು. ರುಮಣ್ವಂತ ಮೊದಲಾದ ಗೆಳೆ

ಯರು ನಾಲ್ವರೂ,[1] "ನಮ್ಮ ಹೆಂಡತಿಯರೂ ಗರ್ಭವುಳ್ಳವರಾದ್ದರಿಂದ, ಇದರಲ್ಲಿ ಏರಿ ಹೋಗುವ ಬಯಕೆಯುಳ್ಳವರಾಗಿದ್ದಾರೆ" ಎಂದು ಹೇಳಲು ಉದಯನನು ಭದ್ರಾವತಿಯ ಅನುಮತಿಯನ್ನು ಪಡೆದು ಯೂಗಿ ಮೊದಲಾದ ಗೆಳೆಯರು ನಾಲ್ವರನ್ನೂ ಅವರುಗಳ ಹೆಂಡತಿಯರನ್ನೂ ಅದರಲ್ಲಿ ಹತ್ತಿಸಿದನು. ಭದ್ರಾವತಿ, ಅದನ್ನು ಆಕಾಶಮಾರ್ಗದಲ್ಲಿ ನಡಸಿಕೊಂಡು ಹೊನ್ನ ಮಲೆ ಮೊದಲಾಗಿ ಮಲಯಮಲೆ ಕಡೆಯಾಗಿರುವ ಹಲವು ಮಲೆಗಳನ್ನೂ ಹಲವು ಕಾಡುಗಳನ್ನೂ ಹಲವು ದೇಶಗಳನ್ನೂ ಹಲವು ನಗರಗಳನ್ನೂ ಮತ್ತೂ ತೋರಿಸಬೇಕಾದ ಎಡೆಗಳು ಹಲವನ್ನೂ ತೋರಿಸಿ ಬಿಟ್ಟು ಮರಳಿ ಕೌಶಾಂಬೀ ನಗರಕ್ಕೆ ಬಂದು ಸೇರಿದಳು.

ಸೇರಿದ ಬಳಿಕ ಉದಯನನು ವಿಮಾನವನ್ನು ಮಾಡಿದ ಬಡಗಿ ಕೆಲಸದ ಎಳೆಯನ ರೂಪದಲ್ಲಿ ನೆರವಾದ ಭದ್ರಾವತಿಯನ್ನು ಕರೆದು ಬಹಳ ಉಪಚಾರದ ಮಾತುಗಳನ್ನು ಹೇಳಿ, "ನಮ್ಮ ದೊಡ್ಡ ತೊಂದರೆಯನ್ನು ತೀರಿಸಿದ ನಿನಗೆ ನಮ್ಮಿಂದ ಮಾಡಲಾಗುವ ಪ್ರತ್ಯುಪಕಾರ ಯಾವುದು?" ಎಂದು ಹೇಳಿ ತನ್ನ ಆಭರಣಗಳನ್ನೆಲ್ಲ ಕಳಚಿ ಕೊಡತೊಡಗಿದ ಸಮಯದಲ್ಲಿ ಭದ್ರಾವತಿ ಅವನ್ನು ತೆಗೆದುಕೊಳ್ಳದೆ ತನ್ನ ಹಳೆಯ ಚರಿತ್ರೆಯನ್ನೆಲ್ಲ ಹೇಳಿ, "ನಾನು ಭದ್ರಾವತಿಯೆಂಬ ಹೆಣ್ಣಾನೆಯಾಗಿದ್ದಾಗ, ನನ್ನ ಮರಣಕಾಲದಲ್ಲಿ ನೀವು ಮಾಡಿದ ಉಪಕಾರಕ್ಕೆ ಪ್ರತಿಯಾಗಿ ನನ್ನಿಂದ ಮಾಡ ಬಹುದಾದ್ದು ಒಂದೂ ಇಲ್ಲ. ನೀವೂ ನಾನೂ ಬೇರೆ ಅಲ್ಲ" ಎಂದು ಹೇಳಿ ಅಪ್ಪಣೆ ಪಡೆದು ತನ್ನ ಹಿಂದಿನ ದೇವಸ್ತ್ರೀರೂಪವನ್ನು ತಾಳಿದಳು.

ಆ ಮೇಲೆ ಅವಳು ಆಕಾಶಮಾರ್ಗದಲ್ಲಿ ಹೋಗುವುದಕ್ಕೆ ತಕ್ಕ ಮಂತ್ರ ವೊಂದನ್ನು ಅವನಿಗೆ ಉಪದೇಶಿಸಿಬಿಟ್ಟು ತನ್ನೆಡೆಗೆ ಹೋಗಲು, ಉದಯನ ಮೊದ ಲಾದವರು ಅವಳನ್ನು ನೋಡಿ ಹೊಗಳಿ ನಮಸ್ಕಾರ ಮಾಡಿದರು.

ಉದಯನನು ವಾಸವದತ್ತೆಯನ್ನು ಬಹಳವಾಗಿ ಕಾಪಾಡಿಕೊಂಡು ಅವಳಿಗೆ ಬೇಕಾದುವನ್ನು ಮಾಡುತ್ತ ಬಂದಾಗ ಅವಳು ಒಳ್ಳೆಯ ದಿನದಲ್ಲಿ ಗಂಡು ಮಗು ವೊಂದನ್ನು ಹೆತ್ತಳು. ಬಳಿಕ ಯೂಗಿ ಮೊದಲಾದ ನಾಲ್ವರುಗಳ ಹೆಂಡತಿಯರೂ ಗಂಡುಮಕ್ಕಳನ್ನು ಹೆತ್ತರು. ಆಗ ಉದಯನನೂ ಗೆಳೆಯರೂ ಮಿಕ್ಕವರೂ ಮಿಗಿಲಾದ ದಾನಧರ್ಮಗಳನ್ನು ಮಾಡಿದರು; ಮುರಜು ಬಾರಿಸಿ ನಾಡಿನವರಿಗೂ ನಗರದವರಿಗೂ ಉತ್ಸವ ಮಾಡುವಂತೆ ತಿಳಿಸಿದರು.

---

[1] ರುಮಣ್ವಂತ ಮೊದಲಾದ ಮೂವರಿಗೂ ವಿವಾಹವಾದಾಗಲೆ ಯೂಗಿಗೂ ಮೊದಲ ಸಲ ವಿವಾಹವಾಗಿರಬೇಕೆಂಬುದು ಇದರಿಂದ ಅರಿಯಲ್ಪಡುವುದು.

ಆ ಸುದ್ದಿಯನ್ನು ಉದಯನನು ದರ್ಶಕನಿಗೂ ಪ್ರದ್ಯೋತನನಿಗೂ ಮತ್ತುಳಿದವರಿಗೂ ಹೇಳಿಕಳಿಸಿದನು. ಹನ್ನೆರಡು ದಿನಗಳು ಕಳೆದುವು. ಬಳಿಕ ನಾಮಕರಣ ಮಾಡತೊಡಗಿದರು. ಉದಯನನ ಮಗನು ಕುಬೇರನಿಂದ ಕೊಡಲ್ಪಟ್ಟವನಾದ್ದರಿಂದ ಅವನಿಗೆ ನರವಾಹನದತ್ತನೆಂಬ ಹೆಸರು ಇಡಲ್ಪಟ್ಟಿತು. ಯೂಗಿಯ ಮಗನಿಗೆ ಮರುಭೂತಿಯೆಂದೂ ರುಮಣ್ವಂತನ ಮಗನಿಗೆ ಹರಿಶಿಖನೆಂದೂ ವಸಂತಕನ ಮಗನಿಗೆ ತವಂತಕನೆಂದೂ ಇಡವಕನ ಮಗನಿಗೆ ಗೋಮುಖನೆಂದೂ ಹೆಸರುಗಳು ಇಡಲ್ಪಟ್ಟವು. ನಗರದವರು ಹಲವು ಬಗೆಯಲ್ಲಿ ಹೊಗಳಿ ಕೊಂಡಾಡಿದರು. ಮಕ್ಕಳು ದಿನದಿನಕ್ಕೆ ಪೆರೆಯಂತೆ ಬೆಳವಣಿಗೆ ಪಡೆದರು.

ಆಮೇಲೆ[1] ಪದ್ಮಾವತಿ ಗರ್ಭತಾಳಿ ಒಬ್ಬ ಮಗನನ್ನು ಹೆತ್ತಳು; ಅವನಿಗೆ ಗೋಮುಖನೆಂಬ ಹೆಸರು ಇಡಲ್ಪಟ್ಟಿತು.

ಉದಯನನಿಂದ ಕಳಿಸಲ್ಪಟ್ಟ ದೂತರುಗಳು ಯೂಗಿಯೊಡನೆ ಉಜ್ಜೈನಿಯನ್ನು ಸೇರಿ ಪ್ರದ್ಯೋತನನಿಗೆ ಆ ಸಂಗತಿಯನ್ನು ತಿಳಿಸಿದರು. ಅವರುಗಳಿಗೆ ಪ್ರದ್ಯೋತನನು ಮಿಗಿಲಾದ ಸನ್ಮಾನಮಾಡಿದನು. ತನ್ನ ಆಳ್ಕೆಗೊಳಪಟ್ಟ ಹದಿನಾರುಸಾವಿರ ನಗರಗಳಲ್ಲಿ ಉಳ್ಳವರನ್ನೆಲ್ಲ ಬರಮಾಡಿ ಅವರುಗಳಿಗೆ ನಲ್‌ಕೊಡುಗೆ ಕೊಟ್ಟನು; ಉತ್ಸವ ಮಾಡಿಸಿದನು.

ಆಮೇಲೆ ಅವನು ಒಂದುದಿನ ದೊಡ್ಡ ಆಸ್ಥಾನದಲ್ಲಿದ್ದು ಯೂಗಿಯನ್ನು ಕೌಶಾಂಬಿಗೆ ಕಳಿಸಲೆಣಿಸಿ ತನ್ನ ಮಂತ್ರಿಗಳಲ್ಲಿ ಮೇಲಾದ ಶಾಲಂಕಾಯನನ್ನೂ ಯೂಗಿಯನ್ನೂ ಬರಿಸಿ ಎದುರಿನಲ್ಲಿ ಇರುವಂತೆ ಮಾಡಿ ಅವರುಗಳ ಕಲ್ವಿಯನ್ನು ಅಳೆಯಲೆಳಸಿ ನೀತಿಶಾಸ್ತ್ರವಾದವನ್ನು ಮಾಡಿಸಿದನು; ಆ ಇಬ್ಬರಿಗೂ ವಾದಯುದ್ಧ ನಡೆಯಿತು. ಆ ಹೋರಾಟದಲ್ಲಿ ಯೂಗಿ ಗೆದ್ದನು. ಆಗ,

ಪ್ರಸನ್ನಮುಖದಿಂದಲೆರೆಯನೂ ನಲಿದೊಲಿದು,
ನಣ್ಪಿನಾ ಹಿರಿಮೆಯೂ ಕಲ್ವಿಯೂ ಅಗಲವೂ
ಗುಣದ ನಲ್‌ಗೈಮೆಯೂ ಪಡೆಗೈಮೆ ಮಹಿಮೆಯೂ
ಕಾಯ್ವ ಜನರಾದರೂ ಕೆಟ್ಟುದನದೇನನೂ
ನುಡಿಯದಂತಿರುವ ಮಿಗಿಲಾರ್ಪುಮಿವಗಲ್ಲದೆಯೆ
ಬೇರಿಲ್ಲ; ಇವನಿಂದ ಪಡೆದ ಅವಗಲ್ಲದೆಯೆ
ಬೇರಿಲ್ಲ ಅರಸುಮಹಿಮೆ.

೫, ೭ : ೧೦೬–೧೧೨.

---

[1] ಈ ಸಂಗತಿ ಬೇರೆ ಗ್ರಂಥಗಳಿಂದ ಅರಿತು ಬರೆದದ್ದು.

ಎಂದು ಯೂಗಿಯನ್ನು ಹಲವುರೀತಿ ಕೊಂಡಾಡಿ ಭರತನೆಂಬ ಮಂತ್ರಿಯ ತಂಗಿಯಾದ ತಿಲಕಸೇನೆಯನ್ನೂ ಶಾಲಂಕಾಯನ ತಂಗಿ ಯಾಪ್ಯೆಯನ್ನೂ ಅವನಿಗೆ ಮದುವೆ ಮಾಡಿಸಿ,

"ಮಾತುಮಾತಿನಲಿನಿಯ ಜ್ಞಾನದೊಲು ನಿಪುಣತೆಯ
ತರುವ ಹಿರಿಗುಣವುಳ್ಳ ನಿನ್ನಿನಿಯ ಕೆಳೆತನವ
ನೆನೆದಂತೆ ನೆನೆದಂತೆ ಮನಸು ಸುಖಪಡುವಂತೆ,
ಬಿರಿವು ಮಿಗೆ ದುಗುಡವನು ನಮ್ಮೆಡೆಗೆ ಬರಿಪಂತೆ,

ಜ. ೭ : ೧೪೪–೫೧

ಕೌಶಾಂಬೀನಗರಕ್ಕೆ ಹೋಗುವವನಾಗು; ಉದಯನನು ನಿನ್ನನ್ನು ಕಳಿಸುವಂತೆ ತಿಳಿಸಿದ್ದರಿಂದ ಈಗ ಕಳಿಸಲು ನಿಶ್ಚಯಿಸಿದ್ದೇನೆ. ನಿನ್ನನ್ನು ಹೋಲುವ ನಲ್‌ನಡೆಯುಳ್ಳವರು ಲೋಕದಲ್ಲಿ ಇರುವರೋ?" ಎಂದು ನುಡಿದು ಉಪಚರಿಸಿ ಕಳಿಸಿದನು.

ಅವನು ಕೊಟ್ಟ ಅರುಮೆಯೊಡವೆ ಮೊದಲಾದುವನ್ನು ಮುಂದಾಗಿ ಕಳಿಸಿಬಿಟ್ಟು ಅವನು ದಯಪಾಲಿಸಿದ ಹಿರಿಸಿರಿಯೊಡನೆ ಯೂಗಿ ಹಿಂದೆ ಹೊರಟು ಕೌಶಾಂಬಿಗೆ ಹೋದನು.

ಕೌಶಾಂಬೀನಗರದಲ್ಲಿ ಯೂಗಿ ಉದಯನನನ್ನು ಕಂಡು ಪ್ರದ್ಯೋತನನು ಮಾಡಿದ ಸನ್ಮಾನಗಳನ್ನೂ ಬೇರೆಯುವನ್ನೂ ಹೇಳಲು ಉದಯನನು ಸಂತೋಷಪಟ್ಟು ಗೆಳೆಯರೊಡನೆ ಕಲೆತು ಅರಸಾಳ್ಕೆಗೈದುಕೊಂಡಿದ್ದನು.

ನರವಾಹನದತ್ತನು ದಿನದಿನಕ್ಕೆ ಹೆಚ್ಚಿಗೆಯನ್ನು ಪಡೆದು ಮರುಭೂತಿ ಮೊದಲಾದ ನಾಲ್ವರು ಗೆಳೆಯರೊಡನೆಯೂ ಕೂಡಿ ಧರ್ಮಶಾಸ್ತ್ರ ಮೊದಲಾದುವುಗಳಲ್ಲಿಯೂ ಧನುರ್ವೇದದಲ್ಲಿಯೂ ಮಿಗಿಲಾದ ನೈಪುಣ್ಯವುಳ್ಳವನಾಗಿ, ಯೌವನ ಪಡೆದು ದಾನವ್ರತವನ್ನು ತಾಳಿ ಮೇಲ್ಮೆಯೊಡನೆ ಬೆಳಗುವವನಾದನು.

ಆಗ ಆ ನಗರದಲ್ಲಿ ಕಲ್ಪಿ ಕೇಳ್ಪಿಗಳಲ್ಲಿ ಶ್ರೇಷ್ಠರಾದವರಾದ ಎರಡುಸಾವಿರ ದೈನೂರು ಗಣಿಕೆಯರಲ್ಲಿ ಶ್ರೇಷ್ಠಳಾದ ಕಳಿಂಗಸೇನೆಯೆಂಬವಳ ಮಗಳು ಮದನಮಂಚಿಕೆ[1]ಯೆಂಬವಳು ತನ್ನ ಮಾಡದ ಮೇಲುಳ್ಳ ಬೆಳುದಿಂಗಳು ಮಚ್ಚಿನಲ್ಲಿ ಗೆಳತಿಯರೊಡನೆ ಆಡಿದ ಚೆಂಡುಗಳಲ್ಲಿ ಒಂದು ಜಾಲಂಧ್ರದ ಮಾರ್ಗವಾಗಿ ಬಂದು, ಬೀದಿಯಲ್ಲಿ ಗೆಳೆಯರು ಸುತ್ತುವರಿಯಲು ಆನೆಯಮೇಲೇರಿ ಹೋಗುವ ನರವಾಹನದತ್ತನ ಮೃದುವಾದ ಬಟ್ಟೆಯಮೇಲೆ ಬಿದ್ದಿತು. ಅದನ್ನು ಎತ್ತಿಕೊಂಡು ನೋಡಿ, "ಇದನ್ನು

[1] ಮದನಮಂಚಿಕೆಯೆಂಬವಳು ಕೌಶಾಂಬಿಯಲ್ಲಿದ್ದ ಧನಮಿತ್ರನೆಂಬ ವರ್ತಕನಿಗೆ ಕಲಿಂಗಸೇನೆಯೆಂಬವಳಲ್ಲಿ ಹುಟ್ಟಿದವಳೆಂದು ಉದಿತೋದಯ ಕಾವ್ಯದಲ್ಲಿ ತಿಳಿಯುವುದು.

ಇಟ್ಟವಳು ಯಾರು ?" ಎಂದು ಆನೆಯ ಮೇಲೆ ಕೂತುಕೊಂಡಿದ್ದಂತೆಯೇ ಕತ್ತೆತ್ತಿ ನೋಡಿದನು. ಆಗ ಅಲ್ಲಿ ಕಾಣಬಂದ ಮದನಮಂಚಿಕೆಯ ಚೆಲುವಾದ ರೂಪ ಅವನ ಮನಸ್ಸನ್ನು ಕವರಿತು. ಅದರಿಂದ ಮರುಳಾಗಿ ಅವನು ಕೆಲಸಗೆಟ್ಟಿದ್ದು ಬಳಿಕ ಆ ಚೆಂಡನ್ನೇ ತನಗೆ ನೆರವಾಗಿ ತೆಗೆದುಕೊಂಡು ಹೋಗಿ ಒಂದು ತೋಪಿನಲ್ಲಿದ್ದು ಒಡನೆ ಬಂದ ತನ್ನ ಗೆಳೆಯನಾದ ಗೋಮುಖನನ್ನು ಕರೆದು, "ಈ ಚೆಂಡನ್ನು ಎಸೆದ ಹೆಂಗಸನ್ನು ನೀನು ಬಲ್ಲೆಯಾದರೆ ಹೇಳಬೇಕು" ಎಂದು ಕೇಳಿದನು.

ಚಿತ್ರವಿದ್ಯೆಯಲ್ಲಿ ಶ್ರೇಷ್ಠನಾದ ಗೋಮುಖನು ಆ ಚೆಂಡನ್ನು ಕೈಗೆ ತೆಗೆದುಕೊಂಡು ಚಂದನವನ್ನು ಪೂಸಿದ ಕೈಯಿಂದ ಆ ಹೆಂಗಸು ಒತ್ತಿ ಹಿಡಿದುಕೊಂಡಿದ್ದರಿಂದ ಬೆರಳು ವರಿಸೆಗಳ ಗುರುತುಗಳು ಅದರಲ್ಲಿ ಹತ್ತಿಕೊಂಡಿರುವುದನ್ನು ಅರಿತು ಅವಳ ಆಕಾರವನ್ನು ಪೂರ್ತಿಯಾಗಿ ಮನಸ್ಸಿನಲ್ಲಿ ತಿಳಿದುಕೊಂಡು,

> ಬೆರಳು, ಬೆರಳಿಗೆ ತಕ್ಕುದೆನಿಸುವಾ ಅಂಗೈ,
> ಅಂಗೈಗೆ ತಕ್ಕ ಹೊಂದೊಡವಿಟ್ಟ ಮುಂಗೈ,
> ಮುಂಗೈಗೆ ತಕ್ಕ ಚೆಲ್ವಣಿಗೊಂಡ ನಲ್ದೋಳು,
> ನಲ್ದೋಳಿಗೊಪ್ಪುತಿಹ ತುಂಬುಕಳೆ ಚೆಲ್ವಮೊಗ,
> ಮಾಮಿಡಿಯ ಹೋಲುತಿಹ (ನಗು)ಮಲರ ಸಿಡುಗಣ್ಣು,
> ಹವಳದಂದದ ಬಾಯಿ, ಮುತ್ತಿನಂದದ ಹಲ್ಲು,
> ಹಬ್ಬುಕುಡಿ ಮೂಗು, ತಿದ್ದಿದ ಸುಣ್ಣನೆಯ ಹುಬ್ಬು,
> ತಗಡೊಡವೆ ತೊಟ್ಟ ಕಿವಿ, ಕಿರುಗುರುಳು
>
> ಗ. ಆ : ೧೦೦–೧೦೭

ಇವನ್ನುಳ್ಳ ಒಂದು ಹೆಣ್ಣಿನ ರೂಪವನ್ನು ಪಟದಲ್ಲಿ ಬರೆದು ತಂದು ಆ ಪಟವನ್ನು ನರವಾಹನದತ್ತನಿಗೆ ತೋರಿಸಿ, "ಈ ರೂಪವನ್ನು ಹೋಲುವ ರೂಪವುಳ್ಳವಳು ಈ ನಗರದಲ್ಲಿ ಮದನಮಂಚಿಕೆಯೆಂಬಳು ತಾನೆ" ಎಂದು ಹೇಳಿಬಿಟ್ಟು ಹೊನ್ನುಕಾಣಿಕೆಗಳೊಡನೆ ಅವಳ ಮನೆಗೆ ಹೋಗಿ ಅವಳ ಹೆತ್ತತಾಯನ್ನು ಕಂಡು ನಡೆದದ್ದನ್ನು ಹೇಳಿದನು.

ಹೇಳಲು ಅವಳು, "ನಾವು ಸೇವಿಸುವ ದೇವರು ವರಕೊಡುವುದು" ಎಂದು ಹೇಳಿ ಪ್ರೀತಿಯಿಂದ ಒಡಂಬಟ್ಟಳು. ಅವಳ ಬಳಗದವರು, "ಉದಯನನ ಅನುಮತಿ ಪಡೆಯದೆ ಅರಸುಕುಮಾರನಿಗೆ ಇವಳನ್ನು ಕೊಡುವುದು ದೊಡ್ಡ ತಪ್ಪಾಗುವುದು" ಎಂದು ತಡೆದರು. ಗೋಮುಖನು ಅದನ್ನು ಉದಯನನಿಗೆ ತಿಳಿಸಲು, ಅವನು ಬಹಳ ಸಂತೋಷಿಸಿ ವಾಸವದತ್ತೆಯ ಅನುಮತಿಪಡೆದು ನರವಾಹನದತ್ತನಿಗೆ ಮದನ ಮಂಚಿಕೆಯನ್ನು ಒಳ್ಳೆಯ ದಿನದಲ್ಲಿ ಮದುವೆಮಾಡಿದನು.

ಆ ಮೇಲೆ ಕೌಶಾಂಬೀನಗರದಲ್ಲಿ ಮಿಗಿಲು ಉತ್ಸವದಿಂದ ಹಬ್ಬವೊಂದು ನಡೆಯಿತು. ಆ ನೋಟವನ್ನು ನೋಡಬಯಸಿ ವಿದ್ಯಾಧರ ನಗರದಲ್ಲುಳ್ಳ ನೂರುಹತ್ತು ಅರಸರುಗಳಲ್ಲಿ ಶ್ರೇಷ್ಠನಾದವನಾದ ಮಾನಸವೇಗನೆಂಬವನು ಅಲ್ಲಿ ಬಂದು ಆ ನಗರದ ಮಹಿಮೆಗಳನ್ನೆಲ್ಲ ನೋಡಿಕೊಂಡು ಹೋದನು. ಆಗ ಅರಮನೆಯೊಳಗೆ ಮಾಡಿದ್ದಾದ ನಾಲ್ಬಗೆಯ ನೆಲಗಳೂ ಸುತ್ತಿದ ಒಂದು ತೋಪಿನೆಡೆಯಲ್ಲುಳ್ಳ ಮಾಡುಬೆಟ್ಟವೊಂದರ ಶಿಖರದಲ್ಲಿ ನಿಂತುಕೊಂಡು ನಗರದಲ್ಲಿ ನಡೆಯುವ ಹಬ್ಬದ ಅಲಂಕಾರವನ್ನು ನೋಡುವವಳಾದ ಮದನಮಂಚಿಕೆಯನ್ನು ಅವನು ಕಂಡು ಆಶ್ಚರ್ಯಪಟ್ಟು ಅವಳನ್ನು ಎತ್ತಿಕೊಂಡು ತನ್ನ ನಗರಕ್ಕೆ ಹೋಗುವುದಕ್ಕೆ ಸಮಯವನ್ನು ನೋಡುತ್ತಲೇ ಇದ್ದನು.

ಅವನು ಹಾಗೆ ಇರುವಲ್ಲಿ, ನರವಾಹನದತ್ತನೂ ಮದನಮಂಚಿಕೆಯೂ ಒಂದು ಹೂದೋಪನ್ನು ಸೇರಿ ಅಲ್ಲಿರುವ ಬಳ್ಳಿ ಬೀಡೊಂದನ್ನು ಸಾರಿ ಮೃದುವಾದ ಮಲರುಗಳನ್ನು ಹರಡಿರುವ ಹಾಸಿಗೆಯಲ್ಲಿ ವಿಶ್ರಮಿಸಿ ನಿದ್ರೆಮಾಡಿದರು. ಅದನ್ನು ಕಂಡ ಮಾನಸವೇಗನು ತನ್ನ ಮಾಯೆಯಿಂದ ನರವಾಹನನನ್ನು ಬಹಳ ಚೆನ್ನಾಗಿ ನಿದ್ರಿಸುವಂತೆ ಮಾಡಿಬಿಟ್ಟು ಮದನಮಂಚಿಕೆಯನ್ನು ಮಟ್ಟಿಗೆ ಮೆಲ್ಲನೆ ಎತ್ತಿಕೊಂಡು ಆಕಾಶದಲ್ಲೆದ್ದು, "ಇಂದು ಮಿಗಿಲು ಶ್ರೇಷ್ಠವಾದ ಅರುಮೆಯಾದ ಪುರುಳೊಂದನ್ನು ಪಡೆದೆವು" ಎಂದು ಸಂತೋಷ[1]ಪಟ್ಟು ಹೋಗಿ ತನ್ನ ನಗರವನ್ನು ಸೇರಿ ಅವಳನ್ನು ಒಂದು ಶ್ರೇಷ್ಠವಾದ ಎಡೆಯಲ್ಲಿ ಮೆಲ್ಲನೆ ಇಟ್ಟನು.

ಮದನಮಂಚಿಕೆ ನಿದ್ದೆ ತಿಳಿದೆದ್ದು ನಾಲ್ಕು ಕಡೆಯನ್ನೂ ನೋಡಿ, "ಈ ಎಡೆ ಬಹಳ ಹೊಸದಾಗಿ ಇರುವುದಲ್ಲಾ; ಇಲ್ಲಿ ನಾನು ಬಂದದ್ದಕ್ಕೆ ಕಾರಣ ಯಾವುದು?" ಎಂದು ಚಿಂತೆ ಹುಟ್ಟಿ ಮೈಮರೆತು ಸಂಕಟಪಡುವವಳಾದಳು. ಆಗ ಮಾನಸವೇಗನು ಅವಳ ಬಳಿ ಸಾರಿ ತನ್ನ ಬಯಕೆಯನ್ನು ತಿಳಿಸಿದನು. ಅವಳು ಒಡಂಬಡದೆ ತಿರಸ್ಕರಿಸಲು ಅವನು ವ್ಯಥೆಪಟ್ಟು "ಮದನಮಂಚಿಕೆಯ ಮನಸ್ಸನ್ನು ಹೇಗಾದರೂ ಬೇರ್ಪಡಿಸಿಬಿಟ್ಟು ಬಾ" ಎಂದು ತನ್ನ ತಂಗಿಯಾದ ವೇಗವತಿಯೆಂಬವಳನ್ನು ಅವಳ ಬಳಿ ಕಳಿಸಿದನು. ಅವಳು ಬಂದು ಮಾನಸವೇಗನ ಮೇಲ್ಮೆಯನ್ನು ಎತ್ತಿ ಹೇಳಿ, "ನೀನು ನನ್ನ ಅಣ್ಣನಿಗೆ ಸೇರಿದವಳಾಗಿ ಇರುವೆಯಾದರೆ, ಮಿಗಿಲು ಸುಖವನ್ನು ಪಡೆಯುವೆ" ಎಂದು ಕಾರಣಗಳನ್ನು ತೋರಿಸಿ ಹಲವು ರೀತಿಯಲ್ಲಿ ಒತ್ತಿ ಒತ್ತಿ ಹೇಳಿದ ಕಾಲದಲ್ಲಿ ಮದನಮಂಚಿಕೆ, "ಚೆಲವು, ಕಲ್ಪಿ, ವೀರ, ಮೊದಲಾದ ಎಲ್ಲವುಗಳಲ್ಲಿಯೂ ಮೇಲ್ಪಟ್ಟ

---

[1] ಇದರ ಮುಂದಿರುವ ಕಥೆ ಮೂಲಗ್ರಂಥದ ಓಲೆಪುಸ್ತಕದಲ್ಲಿ ಕಾಣಲ್ಪಡದೆ ಇರುವುದರಿಂದ, ಉದಿತೋದಯ ಕಾವ್ಯ ಮೊದಲಾದ ಬೇರೆ ಗ್ರಂಥಗಳಲ್ಲಿ ಓದಿ ತಿಳಿದು ಬರೆಯಲಾಯಿತು.

ಶ್ರೇಷ್ಠನಾಗಿ ಬೆಳಗುವ ನನ್ನ ತಲೆವನಾದ ನರವಾಹನದತ್ತನನ್ನು ಇನ್ನು ಪಡೆಯ ನಾದರೆ ನಾನು ಪ್ರಾಣಬಿಡುವುದು ನಿಶ್ಚಯ" ಎಂದು ತಿರಸ್ಕರಿಸಿ ನುಡಿದಳು.

ಆ ಮೇಲೆ ತನ್ನ ಅಣ್ಣನ ಕಟ್ಟಳೆಯನ್ನು ವೇಗವತಿ ಮರೆತು ನರವಾಹನ ದತ್ತನ ಮೇಲೆ ಆಸೆ ಮಿಗಿಲಾಗಿ, "ಹೇಗಾದರೂ ಅವನನ್ನು ಗಂಡನನ್ನಾಗಿ ಬೇಗ ಪಡೆದುಬಿಡಬೇಕು" ಎಂಬ ವೇಗವುಳ್ಳವಳಾಗಿ ಒಡನೆ ವಿಮಾನವನ್ನು ಹತ್ತಿ ಹೊರಟು ಬಂದು ಕೌಶಾಂಬೀನಗರವನ್ನು ಸೇರಿದಳು; ಆಗ ನರವಾಹನದತ್ತನು ಮದನ ಮಂಚಿಕೆಯ ಬಿರಿವನ್ನು ತಾಳಲಾರದೆ ಸಂಕಟಪಟ್ಟು ಮೈಮರೆತು ತೋಪಿನಲ್ಲೆಲ್ಲ ಅವಳನ್ನು ಹುಡುಕಿ ಅಲವತ್ತುಕೊಂಡು ಗೋಳಾಡುತ್ತಿದ್ದನು. ಅವನ ರೂಪವನ್ನು ವೇಗವತಿ ನೋಡಿ ಬಹಳ ಆಶ್ಚರ್ಯಪಟ್ಟು ಬಯಕೆ ಮಿಗಿಲಾಗಿ ಒಂದು ವಿದ್ಯೆಯ ಬಲ್ಮೆಯಿಂದ ಮದನಮಂಚಿಕೆಯ ರೂಪವನ್ನು ತಾನು ತಾಳಿಕೊಂಡು ಒಂದು ಬಳ್ಳಿ ಮನೆಯಲ್ಲಿ ಇದ್ದಳು; ಅಲ್ಲಿ ಮದನಮಂಚಿಕೆಯನ್ನು ಹುಡುಕಿ ಅಲೆಯುತ್ತಿದ್ದ ನರವಾಹನನು ಬಂದು ಕಂಡು ಚಿಂತೆತೊರೆದು ಮಿಗಿಲಾದ ಆತುರದಿಂದ ಅವಳನ್ನು ತಬ್ಬಿ ಸುಖಪಟ್ಟನು; ಬಳಿಕ ಅವನು ಸಂದೇಹಪಟ್ಟು, "ನೀನು ಯಾರು?" ಎನ್ನಲು, ಅವಳು ತಾನು ಇಂಥವಳೆಂಬುದನ್ನೂ ತನ್ನ ಅಣ್ಣನಾದ ಮಾನಸವೇಗನು ಮದನ ಮಂಚಿಕೆಯನ್ನು ಬಯಸಿ ಕೈವಶಪಡಿಸಿಕೊಂಡು ಹೋದದ್ದನ್ನೂ ಅವಳು ಅವನಿಗೆ ಒಪ್ಪದೆ ಊಟ ನಿದ್ದೆಯಿಲ್ಲದೆ ದುಃಖದಿಂದಿರುವುದನ್ನೂ ತಾನು ಬಂದದ್ದಕ್ಕೆ ಕಾರಣ ವನ್ನು ಹೇಳಿ ಬಳಿಕ ತನ್ನ ನಿಜರೂಪವನ್ನು ತೋರಿಸಿದಳು. ಕಂಡ ನರವಾಹನನು ಸಂತೋಷಗೊಂಡು ಮದನಮಂಚಿಕೆಯನ್ನು ಮರೆತು ವೇಗವತಿಯಲ್ಲಿ ಪ್ರೀತಿ ಹುಟ್ಟಿ ಕಾಮಪರವಶನಾಗಿ ಅವಳೊಡನೆ ಯಾವಾಗಲೂ ಇರುವವನಾದನು.

ಇವರುಗಳು ಹೀಗಿರಲು, ಮಾನಸವೇಗನು ತನ್ನ ತಂಗಿಯನ್ನು ಕಾಣದವನಾಗಿ ಹಲವೆಡೆಗಳಲ್ಲೂ ಹುಡುಕಿಕೊಂಡು ಬಂದು ಕೌಶಾಂಬಿಗೆ ಸೇರಿದ ತೋಪಿನಲ್ಲಿದ್ದ ಅವರಿಬ್ಬರನ್ನೂ ಕಂಡು ಸಿಟ್ಟು ಬಂದು ಅವರುಗಳನ್ನು ಹಿಡಿದುಕೊಂಡು ಆಕಾಶ ಮಾರ್ಗವಾಗಿ ಹೋದನು; ಆಗ ನಡುದಾರಿಯಲ್ಲಿ ನರವಾಹನನನ್ನು ದಿಢೀರೆಂದು ಕೆಳಗೆ ತಳ್ಳಿಬಿಟ್ಟನು; ವೇಗವತಿ ತನ್ನ ವಿದ್ಯೆಯ ಬಲ್ಮೆಯಿಂದ ಅವನಿಗೆ ಯಾವುದೊಂದು ತೊಂದರೆಯೂ ಆಗದಂತೆ ಮಾಡಿಸಿದಳು. ನರವಾಹನನು ಬಿದ್ದ ಎಡೆ [1]ಶತಾನೀಕ ಮುನಿಗಳ ಆಶ್ರಮವಾದ್ದರಿಂದ, ಆ ಮುನಿಗಳ ಮಹಿಮೆಯನ್ನು ಕೇಳಿ ಅರಿತ ಅವನು ತನ್ನ ದುಃಖವನ್ನು ಅವರು ಹೇಗೂ ತೀರಿಸಿಬಿಡುವರೆಂದು ನಿಶ್ಚಯಿಸಿ ಹೋಗಿ ಅವರನ್ನು ಪ್ರೀತಿಯಿಂದ ನಮಸ್ಕರಿಸಿದನು.

---

[1] ಇವರು ಉದಯನನ ತಂದೆ.

ಶತಾನೀಕರು ಜ್ಞಾನದಿಂದ ಅವನನ್ನು ಇಂಥವನೆಂದು ಅರಿತು, "ಉದಯನನ ಮಗನೇ! ನಿನಗೆ ಮಂಗಳವೂ ಅರಿವೂ ಉಂಟಾಗಲಿ" ಎಂದರು. "ನಮ್ಮ ತಂದೆಯ ಹೆಸರನ್ನು ಹೇಗೆ ಅರಿತಿರಿ?" ಎಂದು ಆಶ್ಚರ್ಯಪಟ್ಟು ಅವನು, "ದೇವರು ಯಾರು?" ಎಂದು ಕೇಳಿದಾಗ ಅವರು, "ನಾನು ನಿನ್ನ ತಂದೆಯ ತಂದೆ" ಎಂದದ್ದಲ್ಲದೆ ತನ್ನ ಚರಿತ್ರೆಯೆಲ್ಲವನ್ನೂ ಹೇಳಿದರು. ಅವನು, "ವಿದ್ಯಾಧರಲೋಕದ ಆಳ್ಕೆಯನ್ನು ನಾನು ಪಡೆಯಲಾಗುವುದು ಎಂದು ಹಿಂದೆ ಕೇಳಿದ್ದೇನೆ. ಅದನ್ನು ಪಡೆಯುವುದಕ್ಕೆ ಉಪಾಯ ಯಾವುದು?" ಎಂದು ಕೇಳಲು ಅವರು, "ನಿನ್ನ ನಗರಕ್ಕೆ ಹೋಗಿ ಸೇರಿ ಉದಯನನಿಂದ ಆಕಾಶಮಾರ್ಗವಾಗಿ ಹೋಗುವುದಕ್ಕೆ ತಕ್ಕ ವಿದ್ಯೆಯನ್ನು ಪಡೆದು ಅದರ ಮಹಿಮೆಯಿಂದ ಆ ಆಳ್ಕೆಯನ್ನು ಪಡೆಯುವೆ" ಎಂದರು.

ಆ ಮೇಲೆ ನರವಾಹನನು ಅವರನ್ನು ನಮಸ್ಕರಿಸಿ ಅವರು ಹೇಳಿದಂತೆ ಕೌಶಾಂಬಿಯನ್ನು ಸೇರಿ ತನ್ನನ್ನು ಕಾಣದೆ ಹುಡುಕಿ ಹುಡುಕಿ ಸಂಕಟಪಡುತ್ತಿದ್ದ ತಾಯಿ ತಂದೆಗಳ ಬಳಿ ಸಾರಿ ನಮಸ್ಕರಿಸಿ ನಡೆದುದನ್ನು ಹೇಳಿದನು. ಉದಯನನು ಅವನಿಗೆ ಮೇಲೆ ಹೇಳಿದ ಮಂತ್ರವನ್ನು ಉಪದೇಶಿಸಲು ನರವಾಹನನು ವಿಮಾನವನ್ನು ಏರಿ ಹೋಗಿ ವಿಜಯಾರ್ಧವೆಂಬ[1] ಮಲೆಯ ತೆಂಕಣ ಭಾಗದಲ್ಲುಳ್ಳ ಶ್ರೀಧರವೆಂಬ ನಗರವನ್ನು ಸೇರಿ ಅದರ ಕೋಟೆಬಾಗಿಲಲ್ಲಿ ತಂಗಿ ಇದ್ದನು.

ಆಗ ಒಬ್ಬನು ಬಂದು ನಮಸ್ಕರಿಸಿ, "ಗಂಧರ್ವ ಪುರದ ಅರಸನಾದ ನೀಲವೇಗನಿಗೆ ನಾಗದತ್ತೆಯೆಂಬವಳಲ್ಲಿ ಹುಟ್ಟಿದ ಅನಂಗವಿಲಾಸಿನಿಯೆಂಬವಳು, ಹಿಂದೊಂದು ದಿನ ನಿದ್ದೆಮಾಡುವಾಗ ಒಂದು ಸಿಂಹದ ಮರಿ ಭೂಮಿಯಿಂದ ಬಂದು ತನಗೆ ಮಾಲೆ ಸೂಡಿದ್ದಾಗಿ ಕನಸೊಂದನ್ನು ಕಂಡು ಅದನ್ನು ತಂದೆಗೆ ತಿಳಿಸಿದಳು. ಅವನು ಸುಮಿತ್ರನೆಂಬ ಮುನಿಯ ಬಳಿಸಾರಿ ನಮಸ್ಕರಿಸಿ ಆ ಕನಸನ್ನು ತಿಳಿಸಿ ಅದರ ಫಲವನ್ನು ಕೇಳಿದನು. ಅವರು, 'ಭೂಮಿಯಿಂದ ಧೀರನಾದ ಒಬ್ಬ ಎಳೆಯನು ಬಂದು ನಿನ್ನ ಮಗಳಿಗೆ ಮಾಲೆ ಸೂಡುವನು; ಸೂಡಿದ ಮೇಲೆ ಅವನು ಇಲ್ಲಿ ಚಕ್ರವರ್ತಿಯೂ ಆಗಿ ಎಲ್ಲ ಅರಸರುಗಳನ್ನೂ ಅಡಗಿಸಿ ಆಳ್ಕೆಗೈದುಕೊಂಡು ಬೆಳಗುವನು,' ಎಂದು ಅಪ್ಪಣೆಕೊಡಿಸಿದರು. ಅಪ್ಪಣೆಕೊಡಿಸಲು ನಿಮ್ಮ ಸಲ್ಬರವನ್ನು ದಿನದಿನವೂ ನಿರೀಕ್ಷಿಸಿಕೊಂಡೇ ಇರುವ ಅವನು ನೀವು ಇಲ್ಲಿ ಬಂದದ್ದನ್ನರಿತು ತನ್ನ ಬಳಿ ನಿಮ್ಮನ್ನು ಕರೆದುಕೊಂಡು ಬರುವಂತೆ ಕಟ್ಟಳೆಯಿಟ್ಟನು" ಎಂದು ತಿಳಿಸಲು, ನರವಾಹನನು ಆನಂದಗೊಂಡು ಅವನೊಡನೆ ಆ ಅರಸನ ಬಳಿ ಹೋಗಿ ಅವನ ಬೇಡಿಕೆಯಂತೆ ಅನಂಗವಿಲಾಸಿನಿಯನ್ನು ಮದುವೆ ಮಾಡಿಕೊಂಡನು; ಬಳಿಕ ಅಲ್ಲಿಯೇ ತಂಗಿ ಇದ್ದನು.

---

[1] ಇದು ವಿದ್ಯಾಧರರಿಗೆ ವಾಸದೆಡೆಯಾದ ಒಂದು ಬೆಳ್ಳಿಮಲೆಯೆನ್ನುತ್ತಾರೆ.

ಆಗ ಹಿಂದಿನ ಹುಟ್ಟಿನಲ್ಲಿ ಮಾಡಿದ ಪುಣ್ಯದ ಫಲಗಳು ಕ್ರಮವಾಗಿ ಅವನನ್ನು ಬಂದು ಸೇರುವುವಾದುವು; ಇಂದ್ರನ ಕಟ್ಟಳೆಯಿಂದ ದೇವತೆಗಳು ಬಂದು ಅವನಿಗೆ ನವನಿಧಿಗಳನ್ನೂ ಕೊಟ್ಟುಹೋದರು. ಅವನ ಪರಾಕ್ರಮವನ್ನು ಅರಿತ ಆ ಲೋಕದ ಅರಸುಗಳೆಲ್ಲರೂ ಬಂದು ನಮಸ್ಕರಿಸಿ ಸೇವಿಸಿ ಕಪ್ಪಕೊಟ್ಟು ಅವನ ಕಟ್ಟಳೆಯ ಪ್ರಕಾರ ನಡೆಯುವವರಾದರು. ಆ ಸಂಗತಿಗಳನ್ನರಿತ ಮಾನಸವೇಗನು ಬಹಳ ಅಂಜಿ ತನ್ನ ಬಳಿ ಇದ್ದ ಮದನಮಂಚಿಕೆಯನ್ನು ಕರೆದುಕೊಂಡು ಬಂದು ನರವಾಹನನ ಬಳಿ ಸೇರಿಸಿಬಿಟ್ಟು, "ನನ್ನ ತಪ್ಪನ್ನು ಮನ್ನಿಸಿ ಕೃಪೆಮಾಡಬೇಕು" ಎಂದು ಬೇಡಿದನು; ಬಳಿಕ ಅವನು ತನ್ನ ತಂಗಿ ವೇಗವತಿಯನ್ನೂ ಪ್ರೀತಿಯಿಂದ ನರವಾಹನನಿಗೆ ಮದುವೆಮಾಡಿದನು.

ತನ್ನ ಅಗಲಿಕೆಯಿಂದ ಬಾಡಿಹೋಗಿದ್ದ ಮದನ ಮಂಚಿಕೆಯನ್ನು ನರವಾಹನನು ತಬ್ಬಿ ಇನಿನುಡಿಗಳಿಂದ ಸಂತೋಷಗೊಳಿಸಿ ಅವಳೊಡನೆಯೂ ವೇಗವತಿ ಅನಂಗವಿಲಾಸಿನಿಯೆಂಬವರುಗಳೊಡನೆಯೂ ಆ ಮೇಲೆ ಅಲ್ಲಿ ಮದುವೆಯಾದ ಎಂಟು ಸಾವಿರ ದೇವಿಯರೊಡನೆಯೂ ಸುಖಪಡುವವನಾಗಿ ತನಿ ನಲ್ಲಾಳ್ಕೆ ನಡಸಿ ಚಕ್ರವರ್ತಿಯಾಗಿ ಆ ಲೋಕವನ್ನು ಆಳುತ್ತಿದ್ದನು.

ಆ ಕಾಲದಲ್ಲಿ ತನ್ನ ತಾಯ್‌ತಂದೆಗಳನ್ನು ದರ್ಶಿಸಬೇಕೆಂಬ ಆಸೆ ಅವನಿಗೆ ಉಂಟಾಯಿತು. ಅದರಿಂದ ಅವನು ಪರಿಜನಗಳೊಡನೆಯೂ ಹೆಂಡತಿಯರೊಡನೆಯೂ ಹೊರಟು ಕೌಶಾಂಬೀನಗರವನ್ನು ಸೇರಿ ತಾಯ್‌ತಂದೆಗಳನ್ನು ನಮಸ್ಕರಿಸಿದನು. ಅವನ ಪೆರ್ಮೆಯನ್ನು ಕೇಳಿ ಅವರುಗಳು ಸಂತೋಷಪಟ್ಟರು.

ಆ ಮೇಲೆ ನರವಾಹನದತ್ತನು ಪದ್ಮೆಯ ಮಗನಾದ ಗೋಮುಖನನ್ನು ಎಳೆಯರಸನಾಗಿ ನಿಯಮಿಸುವಂತೆ ತಂದೆಯನ್ನು ಬೇಡಿ ಆ ರೀತಿ ಮಾಡಿಸಿಬಿಟ್ಟು ಅಪ್ಪಣೆ ಪಡೆದುಕೊಂಡು ಹೆಂಡತಿಯರು ಮೊದಲಾದವರೊಡನೆ ವಿದ್ಯಾಧರ ಲೋಕವನ್ನು ಸೇರಿ ಅರಸಾಳ್ಕೆಗೈದುಕೊಂಡು ಬಾಳುವವನಾದನು.

ಮನುಷ್ಯನಾಗಿ ಹುಟ್ಟಿ ವಿದ್ಯಾಧರ ಚಕ್ರವರ್ತಿಯಾಗಿ ಬೆಳಗಿದ ಅವನ ಪುಣ್ಯದ ಹೆಚ್ಚಿಗೆಯನ್ನು ಎಲ್ಲರೂ ಅರಿತು ಕೊಂಡಾಡುವವರಾದರು.

---

# ಉದಯನನ ಚರಿತ್ರ ಸಂಗ್ರಹ

## ಆರನೆಯ ತೊರವುಕಾಂಡ

ಉದಯನನು ತನಗೆ ಎಣೆಯಿಲ್ಲದ ಯೂಗಿ ಮಂತ್ರಿಯಾದದ್ದೂ ವಾಸವದತ್ತೆ ಹೆಂಡತಿಯಾದದ್ದೂ ವಿದ್ಯಾಧರ ಚಕ್ರವರ್ತಿಯಾಗಿ ಬೆಳಗುವ ನರವಾಹನದತ್ತನು ಮಗನಾದದ್ದೂ ಬೇರೆ ಒಳ್ಳೆಯ ಪಡವುಗಳೂ ತಪದ ಫಲವೇ ಆದ್ದರಿಂದ, ಮುಂದೆ ತಾನು ಕೈಕೊಳ್ಳತಕ್ಕದ್ದು ತಪ್ಪಸ್ಸೇ ಎಂದು ನಿಶ್ಚಯಿಸಿ ಸಂಪತ್ತಿನಲ್ಲಿ ಜುಗುಪ್ಸೆ ಪಟ್ಟನು. ಅದನ್ನರಿತ ದೇವಿಯರು ನೀರಾಟವಾಡುವುದು ಮೊದಲಾದುವುಗಳಿಂದ ಅವನ ಮನಸ್ಸನ್ನು ಬೇರ್ಪಡಿಸಿ ತಮ್ಮನ್ನೆ ನೆನೆದು ನಡೆಯುವಂತೆ ಮಾಡಲು ಅವನ ಮನಸ್ಸು ಆ ಮಾರ್ಗದಲ್ಲಿ ಕೆಲವು ದಿನ ಹೋಯಿತು.

ಬಳಿಕ ಒಂದು ದಿನ ಉದಯನನ ಪಟ್ಟದ ಆನೆ ಮದಗೊಂಡು ಹೊರಹೊರಟು ನಗರವನ್ನು ನಾಶಮಾಡತೊಡಗಿ ಯಾರಿಗೂ ಅಡಗದೆ ಮಾವುತರನ್ನೂ ಕುತ್ತು ಕೋಲ್ಕಾರರನ್ನೂ ಸೀಳಿ ಎಸೆಯಿತು; ಆದರಿಂದ ನಗರ ನಡುಗಿತು.

ಆ ಕಾಲದಲ್ಲಿ ಆ ನಗರದ ಪಕ್ಕದ ತೋಪೊಂದರಲ್ಲಿ ತಪದಲ್ಲಿ ಸಿದ್ಧಿ ಪಡೆದ ಚಾರಣರು ಹಲವರು ಬಂದು ತಂಗಿದರು. ಅವರುಗಳಿಗೆ ತಲೆವರಾದ ಧರ್ಮವೀರ ರೆಂಬವರು ತಮ್ಮನ್ನು ಸೇರಿದವರುಗಳಿಗೆ ವಾಡಿಕೆಯಂತೆ ಅಲ್ಲಿ ಧರ್ಮೋಪದೇಶ ಮಾಡುತ್ತಿದ್ದರು. ಆ ಉಪದೇಶದ ಮಾತುಗಳನ್ನು ಮೃಗಗಳೂ ಹಕ್ಕಿಗಳೂ ಕೇಳು ವುವಾಗಿ ತಂತಮ್ಮ ಕೆಲಸಗಳನ್ನು ಮರೆತು ಉಣವುಳಿದು ತಾವು ಮಾಡಿದ ಪಾಪ ಗಳನ್ನು ನೆನೆದು ದುಃಖಪಡುವಂಥವಾಗಿ ಅಡಗಿ ನಿಂತುವು; ಮೇಲೆ ಹೇಳಿದ ಪಟ್ಟದ ಆನೆಯೂ ಸ್ವಭಾವವಾಗಿಯೇ ಅಲ್ಲಿ ಬಂದು ಆ ಅರವೊರೆಯನ್ನು ಕೇಳಿ ಕೋಪವನ್ನು ತೊರೆದು ತನ್ನ ಪಾಪಕೆಲಸಗಳಿಗೆ ಅಂಜಿ ಕಣ್ಣೀರನ್ನು ಸುರಿಸುತ್ತ ಯಾವುದೊಂದು ಕ್ರೂರ ಕೆಲಸವೂ ಇಲ್ಲದೆ ಅರಮನೆಯ ಬಾಗಿಲಲ್ಲಿ ಬಂದು ನಿಂತಿತು.

ಆನೆ ಬಂದು ಅಡಗಿ ನಿಂತದ್ದನ್ನು ಬಾಗಿಲು ಕಾವಲಿನವರು ಅರಸನಿಗೆ ತಿಳಿಸಲು, ಅವನು ಬಂದು ನೋಡಿ ಬೆರಗಾಗಿ ನಿಂತನು; ಆಗ ಯೂಗಿ "ಯಾವುದೋ ಅರವೊರೆ ಯನ್ನು ಕೇಳಿ ಇದು ಪಕ್ವಪಡೆದು ಅಡಗಿ ನಿಂತದ್ದಾಗಿ ತೋರುವುದು; ಇನ್ನು ಏರಿಹೋಗುವುದಕ್ಕೆ ಇದು ತಗುಮೆಯುಳ್ಳದ್ದು" ಎಂದನು. ಉದಯನನು ಅದರ ಹೆಡತಲೆಯನ್ನು ಏರಿದಾಗ ಆನೆ ಅವನನ್ನು ಮಿಗಿಲಾದ ಆಸೆಯಿಂದ ತಾಳಿಕೊಂಡು

ಹೋಗಿ ಮೇಲೆ ಹೇಳಿದ ವನವನ್ನು ಸೇರಿ ನಿಂತಿತು. ಅರಸನು ಆ ವನದಲ್ಲಿ ಹಿರಿಯರು ಹಲವರು ಬಂದಿರುವುದನ್ನು ಅರಿತು ಇಳಿದು ನಮಸ್ಕರಿಸುತ್ತ ಹೋಗಿ ಧರ್ಮವೀರ ಮುನಿಗಳನ್ನು ವಂದಿಸಲು ಅವರು ಅವನಿಗೆ ಒಂದು ಪೀಠವನ್ನು ಕೊಟ್ಟು ಧರ್ಮೋಪ ದೇಶ ಮಾಡಿದರು. ಅದನ್ನು ಕೇಳಿದ ಅರಸನು ಆನಂದಪಟ್ಟು, " ಈ ಆನೆಯ ಹಳೆಯ ಚರಿತ್ರೆ ಏನು ? " ಎಂದು ಕೇಳಲು ಅವರು, " ಶಾಲಿಯೆಂಬುದೊಂದು ನಾಡಿನಲ್ಲಿ ಕಟಕವೆಂಬುದೊಂದೂರಲ್ಲಿ ಉಳ್ಳ ವೃಷಭಕನೆಂಬವನೂ ಅವನ ಹೆಂಡತಿ ಶಾಲಿಯೆಂಬ ವಳೂ ಗೃಹಧರ್ಮ ನಡಸಿಕೊಂಡು ಬರುತ್ತಿರುವಲ್ಲಿ ಅವನ ಹಳೆಯ ಪಾಪವಶದಿಂದ ಅಮರಿಕೆಯೆಂಬ ಒಬ್ಬ ಗಣಿಕೆಯ ವಶದವನಾಗಿ ಕುಲನಡೆವಳಿಯನ್ನು ಬಿಟ್ಟುಬಿಟ್ಟು ಮಿಗಿಲಾದ ಪಾಪಕೆಲಸಗಳನ್ನು ಮಾಡುವವನಾದನು. ಸತ್ತಮೇಲೆ ಅವನೇ ಈ ಆನೆಯ ಜನ್ಮವನ್ನು ಪಡೆದನು ; ಆದ್ದರಿಂದ ಈ ಆನೆ ಧರ್ಮಗಳನ್ನು ಕೇಳಿದೊಡನೆ ಕ್ರೂರಕೆಲಸಗಳನ್ನು ತೊರೆದು ಅಡಗಿ ನಿಂತಿತು " ಎಂದರು.

ಕೇಳಿದ ಉದಯನನು ಅದನ್ನು ಚೆನ್ನಾಗಿ ಕಾಪಾಡುವಂತೆ ಮಾವುತರಿಗೆ ಕಟ್ಟಳೆ ಯಿಟ್ಟು ಅದರ ಪಕ್ಕಕ್ಕೆ ಹೋಗಿ, " ಆನೆಯರಸೇ ! ನಿನಗೆ ನಾನು ಮಾಡಿಸಿದ ತೊಂದರೆಗಳನ್ನು ತಾಳಿಕೊ " ಎಂದು ಹೇಳಿ ಅದನ್ನು ಪ್ರೀತಿಯಿಂದ ಸವರಿ ತನ್ನೆಡೆಗೆ ಹೋಗಿ ಸೇರಿದನು. ಅದರ ಚರಿತ್ರೆಯನ್ನು ಕೇಳಿದ ಎಲ್ಲರೂ ವಿಸ್ಮಯಪಟ್ಟು ಧರ್ಮೋಪದೇಶದ ಪೆರ್ಮೆಯನ್ನು ಕೊಂಡಾಡಿದರು.

ಆ ಮೇಲೆ ಆ ಅರಸನಿಗೆ ವೈರಾಗ್ಯವುಂಟಾಗಲು, ಅವನು ನರವಾಹನದತ್ತನನ್ನು ಬರಿಸಿ, " ನೀನು ಈ ಅರಸಾಳ್ಕೆಯನ್ನು ಒಪ್ಪಿಕೊ ; ತೊರೆದು ತಪಸ್ಸು ಮಾಡು ವುದಕ್ಕೆ ನನ್ನ ಮನಸ್ಸು ತ್ವರೆಗೊಳ್ಳುತ್ತಿದೆ " ಎಂದು ಹೇಳಲು ಅವನು ನಮಸ್ಕರಿಸಿ, " ಅಡಿಯವನಿಗೂ ಅರಸಾಳ್ಕೆಯಲ್ಲಿ ಸ್ವಲ್ಪವೂ ಅಪೇಕ್ಷೆಯಿಲ್ಲ ; ತೊರೆಯುವುದಕ್ಕೇ ನನ್ನ ಮನಸ್ಸು ತ್ವರೆಗೊಳ್ಳುತ್ತಿದೆ " ಎಂದು ತನ್ನ ಅಭಿಪ್ರಾಯವನ್ನು ತಿಳಿಸಿದನು. ತರುವಾಯ ಉದಯನನು ಪದ್ಮೆಯ ಮಗನಾದ ಗೋಮುಖನನ್ನು ಕರೆದು ಅವನಿಗೆ ಮುಡಿಸೂಡಿಬಿಟ್ಟು ಹೋಗಿ ದೇವಿಯರಿಗೂ ತನ್ನ ಅಭಿಪ್ರಾಯವನ್ನು ತಿಳಿಸಿದನು. ಅವರುಗಳೂ ಒಡನೆ ಬಂದು ತಪಸ್ಸು ಮಾಡುವುದಾಗಿ ಹೇಳಿದರು. ಯೂಗಿ ಮೊದ ಲಾದ ಮಂತ್ರಿಗಳು ನಾಲ್ವರೂ ವಾಸದತ್ತೆ ಮೊದಲಾದ ದೇವಿಯರೂ ಬೇರೆಯವರೂ ಪಕ್ಕದಲ್ಲಿ ಸುತ್ತಿಬರಲು ಉದಯನನು ತಪೋವನಕ್ಕೆ ಹೋಗಿ ಅಲ್ಲಿ ತಪಸ್ಸು ಮಾಡಿ ಕೊಂಡಿದ್ದ ಧರ್ಮಶ್ರುತಿಯೆಂಬ ಮುನಿಗಳನ್ನು ಶರಣು ಹೊಂದಿ ಸ್ತುತಿಸಿ, " ಅಡಿ ಗಳೇ ! ತಪೋಮಾರ್ಗಗಳನ್ನು ಉಪದೇಶಿಸಿ ಅಡಿಯವರುಗಳನ್ನು ಉಜ್ಜೀವಿಸಿ ಕರುಣಿಸ ಬೇಕು " ಎಂದು ಪ್ರಾರ್ಥಿಸಿದನು. ಅವರು ಜಿನಧರ್ಮಗಳನ್ನು ವಿಸ್ತಾರವಾಗಿ ಉಪ

ದೇಶಿಸಿದರು. ಉಪದೇಶಿಸಿದ ತರುವಾಯ ಅವನು ಆಗ ಮಾಡಬೇಕಾದ ನಿಯಮಗಳನ್ನು ಮುಗಿಸಿಕೊಂಡು ಧ್ಯಾನಾದಿಗಳನ್ನು ಮಾಡುವವನಾದನು. ತಪದ ನಡವಳಿಕೆಯೂ ಕಳೆಯೂ ಅವನಲ್ಲಿ ಮೇಲಾಗಿ ಬೆಳಗಿದುವು.

ಬಳಿಕ ಉದಯನ ಮುನಿ ಯೋಗಸಮಾಧಿಯನ್ನು ಮಾಡಿ ಮುಗಿಸಿ ಸಿದ್ಧ ಪದವಿಯನ್ನು ಪಡೆದನು. ದೇವಿಯರೂ ಮಂತ್ರಿಗಳೂ ತಪಸ್ಸುಮಾಡಿ ಕಲ್ಪ ಲೋಕವನ್ನು ಪಡೆದು ಸುಖಪಟ್ಟು ಬಾಳಿದರು.

---



ಶ್ರೀಮನ್ಮಧ್ವಾಚಾರ್ಯರು

ಚಿತ್ರಗಾರರಾದ ದಿವಂಗತ ಶ್ರೀ ಬಿ. ಐ. ಮಾಧವರಾಯರ ಪತ್ನಿ
ಶ್ರೀ ಸುಂದರಾಬಾಯಿಯವರ ಅಪ್ಪಣೆ ಪಡೆದು ಪ್ರಕಟಿಸಲಾಗಿದೆ.

# ಶ್ರೀಮನ್ಮಧ್ವಾಚಾರ್ಯರು

ಭಾರತೀಯ ತತ್ವಶಾಸ್ತ್ರಗಳಿಗೆ ವೇದ ಉಪನಿಷತ್ತುಗಳು ಭಗವದ್ಗೀತೆ ಮತ್ತು ಬ್ರಹ್ಮಸೂತ್ರಗಳು ಆಧಾರಸ್ತಂಭಗಳು. ಇವುಗಳಿಗೆ ಪ್ರಸ್ಥಾನತ್ರಯಗಳೆಂದು ಹೆಸರು. ಇವುಗಳನ್ನು ಪ್ರಮಾಣಗಳನ್ನಾಗಿ ಸ್ವೀಕರಿಸಿ ಪ್ರವೃತ್ತವಾದ ಮತಗಳಲ್ಲಿ ಅದ್ವೈತ ವಿಶಿಷ್ಟಾದ್ವೈತ ಮತ್ತು ದ್ವೈತಮತಗಳು ಪ್ರಸಿದ್ಧವಾದುವುಗಳು. ದ್ವೈತಮತವನ್ನು ಉಜ್ಜೀವಗೊಳಿಸಿ ಸ್ಥಾಪನೆಮಾಡಿದವರು ಶ್ರೀಮನ್ಮಧ್ವಾಚಾರ್ಯರು. ಕಳೆದ ಮಾಘ ಮಾಸದ ಶುಕ್ಲನವಮಿಯ ದಿನ ಮಧ್ವಮತಾನುಯಾಯಿಗಳು ತಮ್ಮ ಆಚಾರ್ಯರವರ ದಿನವನ್ನು ಶ್ರದ್ಧಾಭಕ್ತಿಪೂರ್ವಕವಾಗಿ ಎಲ್ಲೆಲ್ಲಿಯೂ ಆಚರಿಸಿದರು.

ದ್ವೈತಸಿದ್ಧಾಂತಸ್ಥಾಪನಾಚಾರ್ಯರಾದ ಶ್ರೀಮನ್ಮಧ್ವಾಚಾರ್ಯರು ಕ್ರಿ.ಶ. ೧೨೩೮ನೆಯ ವಿಳಂಬಿಸಂವತ್ಸರದ ವಿಜಯದಶಮಿಯ ದಿನ ದಕ್ಷಿಣ ಕೆನರಾ ಜಿಲ್ಲೆಯಲ್ಲಿರುವ ಉಡುಪಿಗೆ ಮೂರು ಮೈಲಿ ದೂರದಲ್ಲಿರುವ ಪಾಜಕಕ್ಷೇತ್ರವೆಂಬ ಒಂದು ಸಣ್ಣ ಹಳ್ಳಿಯಲ್ಲಿ ಅವತರಿಸಿದರು. ಇವರ ತಂದೆಯವರಾದ ಮಧ್ಯಗೇಹ ಭಟ್ಟರೂ ತಾಯಿಯವರಾದ ವೇದವತಿಯೆಂಬ ಸಾಧ್ವಿಶಿರೋಮಣಿಯೂ ಭಾಗವತ ಸಂಪ್ರದಾಯದವರಾಗಿದ್ದರು. ಈ ದಂಪತಿಗಳಿಗೆ ಗಂಡುಮಕ್ಕಳು ಹುಟ್ಟಿ ಶೈಶವದಲ್ಲಿಯೇ ಸತ್ತುಹೋದುದರಿಂದ ದೀರ್ಘಾಯುಷ್ಮಂತನಾದ ಪುತ್ರನನ್ನು ಪಡೆಯಲು ಅವರು ಹಂಬಲಿಸುತ್ತಿದ್ದರು. ಸಮೀಪದಲ್ಲಿದ್ದ ಉಡುಪಿಯ ಅನಂತೇಶ್ವರನನ್ನು ಬಹಳವಾಗಿ ಸೇವೆಮಾಡಿ ಈ ದಂಪತಿಗಳು ಒಂದು ಪುತ್ರರತ್ನವನ್ನು ಪಡೆದರು. ಇದೇ ಮುಂದೆ ಶ್ರೀಮನ್ಮಧ್ವಾಚಾರ್ಯರಾಗಿ ಪ್ರಸಿದ್ಧಿಯನ್ನು ಹೊಂದಿತು. ಸರ್ವಲಕ್ಷಣಸಂಪನ್ನವಾದ ಶಿಶುವಿಗೆ ಮಧ್ಯಗೇಹಭಟ್ಟರು ವಾಸುದೇವನೆಂದು ನಾಮಕರಣವನ್ನು ಮಾಡಿದರು. ತೇಜಸ್ವಿಯಾದ ಶಿಶುವು ಪ್ರವರ್ಧಮಾನವಾಗಿ ಬೆಳೆಯುತ್ತಾ ತಂದೆತಾಯಿಗಳನ್ನು ಬಾಲಲೀಲೆಗಳಿಂದ ಆನಂದಗೊಳಿಸಿತು. ಮೂರು ವರ್ಷಗಳು ತುಂಬುತ್ತಿರಲು ವಾಸುದೇವನಿಗೆ ಅಕ್ಷರಾಭ್ಯಾಸವಾಯಿತು. ಅಕ್ಷರಗಳನ್ನು ಪುನಃ ಪುನಃ ಹೇಳಿಕೊಟ್ಟ ತಂದೆಯನ್ನು ಹಿಂದಿನ ದಿನ ಹೇಳಿಕೊಟ್ಟ ಅಕ್ಷರಗಳನ್ನೇ ಪುನಃ ಏಕೆ ಹೇಳುವೆ ಎಂದು ಪ್ರಶ್ನಿಸಿದ ಬಾಲಕನ ಗ್ರಹಣಶಕ್ತಿಯು ತಂದೆಯನ್ನು ವಿಸ್ಮಯಗೊಳಿಸುತ್ತಿತ್ತು. ಇತರ ಬಾಲಕರಿಗಿಂತ ವಿಲಕ್ಷಣನಾದ ತಮ್ಮ ಮಗನಿಗೆ ಮಧ್ಯಗೇಹ ಭಟ್ಟರು ಗೋಪ್ಯದಲ್ಲಿ ಪಾಠವನ್ನು ಹೇಳುತ್ತಿದ್ದರಂತೆ. ಐದನೆಯ ವರ್ಷದಲ್ಲಿ ಉಪನಯನವಾಗಿ ಒಬ್ಬ ಗುರುವಿನ

ಹತ್ತಿರ ಸ್ವಲ್ಪಕಾಲದ ವರೆಗೆ ಪಾಠವು ನಡೆಯಿತು. ವಾಸುದೇವನು ಉಪನಿಷತ್ತುಗಳಲ್ಲಿ ಹೆಚ್ಚು ಆಸಕ್ತಿ ತೋರಿಸುತ್ತಾ ಐತರೇಯ ಉಪನಿಷತ್ತಿನ ಅರ್ಥವನ್ನು ಗುರುಗಳಿಗೇ ವಿವರಿಸಿದನೆಂದು ಆಖ್ಯಾಯಿಕೆ ಇರುವುದು. ಸ್ವಲ್ಪಕಾಲವಾದ ಮೇಲೆ ಉಡುಪಿಯಲ್ಲಿ ಇದ್ದ ಅಚ್ಯುತ ಪ್ರೇಕ್ಷಾಚಾರ್ಯರೆಂಬ ಯತಿಗಳ ಹತ್ತಿರ ವಾಸುದೇವನು ಹೋಗಿ ಅವರ ಸೇವೆಯನ್ನು ಮಾಡಿ ಅವರಿಂದ ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳಬೇಕೆಂದು ಸಂಕಲ್ಪ ಮಾಡಿದನು. ಹುಟ್ಟಿದ ಇತರ ಗಂಡುಮಕ್ಕಳೆಲ್ಲರೂ ಮೃತಿಹೊಂದಿ ಅನಂತೇಶ್ವರನ ಪ್ರಸಾದದಿಂದ ಪಡೆದ ಏಕಮಾತ್ರ ಪುತ್ರನು ಸಂನ್ಯಾಸವನ್ನು ಸ್ವೀಕರಿಸಬೇಕೆಂದು ಸಂಕಲ್ಪಿಸಿರುವ ವಾರ್ತೆಯನ್ನು ಕೇಳಿ ಮಧ್ಯಗೇಹ ಭಟ್ಟರು ವ್ಯಾಕುಲಿತರಾದರು. ಉಡುಪಿಗೆ ಬಂದು ಸಂನ್ಯಾಸವನ್ನು ಸ್ವೀಕರಿಸದಿರು ಎಂದು ನಾನಾ ವಿಧದಲ್ಲಿ ಮಗನನ್ನು ಬೇಡಿಕೊಂಡರು. ಕೊನೆಗೆ ಅವನಿಗೆ ನಮಸ್ಕಾರಮಾಡಿ ದೈನ್ಯದಿಂದ ಕೇಳಿಕೊಳ್ಳಲು ಅತಿಪಟುವಾಗಿದ್ದ ವಾಸುದೇವನು ತಂದೆಯು ಮಗನಿಗೆ ನಮಸ್ಕಾರಮಾಡಲು ಮಗನು ಯತಿಯಾಗಿರಲು ಅಪ್ಪಣೆಮಾಡಿದಂತೆ ಆಯಿತು ಎಂದು ಹೇಳಲು ಮಧ್ಯಗೇಹ ಭಟ್ಟರು ನಿರುತ್ತರರಾದರು. ಕೊನೆಗೆ ತನ್ನ ತಾಯಿಯು ಮತ್ತೊಂದು ಗಂಡು ಮಗುವನ್ನು ಹಡೆಯುವ ವರೆಗೂ ತಾನು ಸಂನ್ಯಾಸಾಶ್ರಮವನ್ನು ತೆಗೆದುಕೊಳ್ಳುವುದಿಲ್ಲವೆಂದು ವಾಸುದೇವನು ತಂದೆಗೆ ಮಾತುಕೊಟ್ಟನು. ಯುಕ್ತಕಾಲದಲ್ಲಿ ವೇದವತಿಯು ಗಂಡು ಮಗುವನ್ನು ಪ್ರಸವಿಸಲು ವಾಸುದೇವನ ಸಂಕಲ್ಪಕ್ಕೆ ಯಾವ ಅಡಚಣೆಯೂ ಇಲ್ಲವಾಗಿ ಅವನು ಅಚ್ಯುತಪ್ರೇಕ್ಷಾಚಾರ್ಯರಿಂದ ಸಂನ್ಯಾಸವನ್ನು ಪಡೆದನು. ಗುರುಗಳು ಬಾಲಸಂನ್ಯಾಸಿಯನ್ನು ಪೂರ್ಣಪ್ರಜ್ಞನೆಂದು ಕರೆದರು. ಆಚಾರ್ಯರು ಸಂನ್ಯಾಸವನ್ನು ಸ್ವೀಕರಿಸಿದಾಗ ಅವರಿಗೆ ಕೇವಲ ೧೨ ವರ್ಷಗಳಾಗಿತ್ತೆಂದು ತಿಳಿದು ಬಂದಿದೆ. ಸಂನ್ಯಾಸವನ್ನು ಸ್ವೀಕರಿಸಿದ ಕೆಲವು ದಿನಗಳನಂತರ ಪೂರ್ಣಪ್ರಜ್ಞರು ವಾಸು ದೇವಶಾಸ್ತ್ರಿಗಳೆಂಬ ತಾರ್ಕಿಕ ಪಂಡಿತರನ್ನು ವಾದಮಾಡಿ ಜಯಿಸಿದರು. ಇದರಿಂದ ಗುರುಗಳಾದ ಅಚ್ಯುತ ಪ್ರೇಕ್ಷಾಚಾರ್ಯರಿಗೆ ಬಹಳ ಸಂತೋಷವಾಗಿ ಶಿಷ್ಯ ರಾದ ಪೂರ್ಣಪ್ರಜ್ಞರಿಗೆ 'ಇಷ್ಟಸಿದ್ಧಿ' ಎಂಬ ಅದ್ವೈತ ಗ್ರಂಥವನ್ನು ಪಾಠಹೇಳಲು ಅವರು ಪ್ರಾರಂಭಿಸಿದರು. ಭಾಗವತ ಮುಂತಾದ ಮುಕುಂದ ಭಕ್ತಿಪ್ರತಿಪಾದಕ ಗ್ರಂಥ ಗಳಲ್ಲಿ ಹೆಚ್ಚು ಅಭಿರುಚಿಯಿದ್ದ ಪೂರ್ಣಪ್ರಜ್ಞರಿಗೆ ನಿರ್ಗುಣಬ್ರಹ್ಮ ಪ್ರತಿಪಾದಕವಾದ ಈ ಅದ್ವೈತ ಗ್ರಂಥದಲ್ಲಿ ಆದರ ಹುಟ್ಟಲಿಲ್ಲ; ಇಷ್ಟೇ ಅಲ್ಲದೆ ಈ ಗ್ರಂಥದಲ್ಲಿದ್ದ ಲೋಪದೋಷಗಳನ್ನು ಎತ್ತಿತೋರಿಸಿ ಗುರುಗಳ ಆಗ್ರಹಕ್ಕೂ ಪಾತ್ರರಾದರು. ಆದರೂ ತರ್ಕಶಾಸ್ತ್ರ, ವೇದ, ಪುರಾಣಗಳಲ್ಲಿ ಅಲ್ಪವಯಸ್ಕನಾದರೂ ಅನುಪಮ ಸ್ಫೂರ್ತಿಯನ್ನು ಪ್ರದರ್ಶಿಸುತ್ತಿದ್ದ ಬಾಲಸಂನ್ಯಾಸಿಯನ್ನು ನೋಡಿ ಇದು ಪೂರ್ವ

ಜನ್ಮ ಸಂಸ್ಕಾರಲಬ್ಧವೆಂದು ನಿಶ್ಚಯಿಸಿ ಅಚ್ಯುತ ಪ್ರೇಕ್ಷಾಚಾರ್ಯರು ಪೂರ್ಣ ಪ್ರಜ್ಞಾಚಾರ್ಯರನ್ನು ಸ್ವತಂತ್ರವಾದ ಮಠಕ್ಕೆ ಸಂನ್ಯಾಸಿಗಳನ್ನಾಗಿ ಅಭಿಷೇಕಮಾಡಿ ಆನಂದತೀರ್ಥರೆಂಬುದಾಗಿ ಅವರನ್ನು ಕರೆದರು. ಆನಂದತೀರ್ಥರೆಂದರೆ ನಿತ್ಯವಾದ ಆನಂದವನ್ನು ಕೊಡುವ ಶಾಸ್ತ್ರವನ್ನು ಉಪದೇಶಿಸಿದವರೆಂದು ಅರ್ಥ; ಮಧ್ವ ಎಂದರೂ ಇದೇ ಅರ್ಥ. ಆದುದರಿಂದ ಪೂರ್ಣಪ್ರಜ್ಞರು ಆನಂದತೀರ್ಥರೆಂದೂ ಮಧ್ವಾಚಾರ್ಯರೆಂದೂ ಪ್ರಸಿದ್ಧರಾದರು.

ಸ್ವತಂತ್ರವಾದ ಸಂನ್ಯಾಸಿಗಳಾದಮೇಲೆ ಆನಂದತೀರ್ಥರು ತಮ್ಮ ದ್ವೈತಮತ ವನ್ನು ಬೋಧಿಸಲು ಪ್ರಾರಂಭಮಾಡಿದರು. ಪ್ರಪಂಚವೆಲ್ಲವೂ ಮಾಯಾಕಲ್ಪಿತ ವಾದುದು; ಜೀವನು ಬ್ರಹ್ಮನಿಂದ ಅಭಿನ್ನನು ಎಂಬ ಅದ್ವೈತವಾದವನ್ನು ಖಂಡನೆ ಮಾಡುತ್ತಾ, ಪ್ರಪಂಚವು ಸತ್ಯವಾದದ್ದು; ಜೀವನು ಪರಮಕಲ್ಯಾಣಗುಣಪರಿ ಪೂರ್ಣನಾದ ಶ್ರೀಮನ್ನಾರಾಯಣನ ಆರಾಧನೆಯಿಂದಲೇ ನಿತ್ಯಸುಖರೂಪ ವಾದ ಮೋಕ್ಷವು ಲಭ್ಯವಾಗುವುದು ಎಂದು ಬೋಧಿಸತೊಡಗಿದರು. ಆ ಕಾಲದಲ್ಲಿ ಭದ್ರವಾಗಿ ಬೇರೂರಿದ್ದ ಅದ್ವೈತಮತವನ್ನು ಖಂಡನೆಮಾಡುತ್ತ ಪಾಂಡಿತ್ಯದಲ್ಲಿಯೂ ವಾದಮಾಡುವುದರಲ್ಲಿಯೂ ಅದ್ವಿತೀಯರಾಗಿದ್ದ ಆಚಾರ್ಯ ರನ್ನು ನಿರ್ಲಕ್ಷಿಸಲು ಸಾಧ್ಯವಾಗದೆ ಅನೇಕ ಪಂಡಿತರು ಇವರಲ್ಲಿ ಬಂದು ವಾದಮಾಡಿ ಪರಾಜಿತರಾದರು. ತತ್ವಶಾಸ್ತ್ರಗಳಲ್ಲೆಲ್ಲಾ ಅದ್ವೈತಮತವೇ ನಿರ್ದುಷ್ಟವಾದುದೆಂಬ ನಂಬಿಕೆಯು ಜನಗಳಿಗೆ ಕಡಮೆಯಾಯಿತು. ಹೊಸ ಸಿದ್ಧಾಂತವನ್ನು ಸ್ಥಾಪನೆ ಮಾಡಲು ಒಂದೇ ಸ್ಥಳದಲ್ಲಿದ್ದರೆ ಆಗುವುದಿಲ್ಲವೆಂದು ತಿಳಿದು ಆಚಾರ್ಯರು ತಮ್ಮ ಗುರುಗಳಿಂದ ಕೂಡಿ ದಕ್ಷಿಣದೇಶದಲ್ಲಿ ತೀರ್ಥಯಾತ್ರೆಮಾಡಲು ಹೊರಟರು. ತೀರ್ಥ ಯಾತ್ರೆ ಮಾಡುವುದರ ಜೊತೆಯಲ್ಲಿ ಅಲ್ಲಲ್ಲಿ ಪರಮತವಾದಿಗಳನ್ನು ಜಯಿಸಿ ತಮ್ಮ ಮತವನ್ನು ಪ್ರಚಾರಮಾಡಿದರು. ಅನಂತಶಯನಕ್ಕೆ ಬಂದಾಗ ಶೃಂಗೇರಿಪೀಠದ ವಿದ್ಯಾ ಶಂಕರರೆಂಬ ಅದ್ವೈತ ಸನ್ಯಾಸಿಗಳ ಜೊತೆಗೆ ವಾದಮಾಡಿ ಇಬ್ಬರೂ ಕೋಪದಿಂದ ಬೇರೆ ಯಾದರು. ಪುನಃ ರಾಮೇಶ್ವರದಲ್ಲಿ ಇಬ್ಬರೂ ಚಾತುರ್ಮಾಸ್ಯಕ್ಕಾಗಿ ಸಂಧಿಸಿದರು. ಬಹಳ ಹಿಂದಿನ ಕಾಲದಿಂದಲೂ ಬಂದಿದ್ದ ಅದ್ವೈತಮತವನ್ನು ಖಂಡಿಸಿ ದ್ವೈತ ಮತವನ್ನು ಸ್ಥಾಪಿಸಲು ಪ್ರಯತ್ನಮಾಡುತ್ತಿದ್ದ ಹೊಸ ಸನ್ಯಾಸಿಗಳನ್ನು ವಿದ್ಯಾ ಶಂಕರರು ಕಿರುಕುಳಪಡಿಸುತ್ತಿದ್ದರೆಂದು ಕಂಡುಬರುವುದು. ರಾಮೇಶ್ವರದಿಂದ ಶ್ರೀರಂಗ ಶ್ರೀಮುಷ್ಣ ಮೊದಲಾದ ಕ್ಷೇತ್ರಗಳನ್ನು ಸಂದರ್ಶಿಸಿ ಪಯಸ್ವಿನೀ ನದಿಯತೀರಕ್ಕೆ ಬಂದರು. ಅಲ್ಲಿ ಒಂದು ಸಭೆಯು ನಡೆದ ಕಾಲದಲ್ಲಿ ಆಚಾರ್ಯರು ವೇದಗಳಿಗೆ ಮೂರು ಅರ್ಥವೂ ಭಾರತಕ್ಕೆ ಹತ್ತು ಅರ್ಥವೂ ವಿಷ್ಣುಸಹಸ್ರನಾಮಕ್ಕೆ

ಸಾವಿರ ಅರ್ಥವೂ ಇರುವುವೆಂದು ಹೇಳಿದರು. ಸಭಿಕರು ಇದನ್ನು ಸಂಬದಿರಲು ವಿಷ್ಣುಸಹಸ್ರನಾಮದ ವಿಶ್ವ ಎಂಬ ಮೊದಲನೆಯ ಪದಕ್ಕೆ ಸಾವಿರ ಅರ್ಥಗಳನ್ನು ಪ್ರತಿಪಾದನೆಮಾಡಿ ಸಭಿಕರನ್ನು ವಿಸ್ಮಯಗೊಳಿಸಿದರು. ದಕ್ಷಿಣ ದೇಶದ ಯಾತ್ರೆಯನ್ನು ಪೂರೈಸಿ ಉಡುಪಿಗೆ ಬಂದ ಮೇಲೆ ದ್ವೈತಸಿದ್ಧಾಂತವನ್ನು ಸ್ಥಿರವಾಗಿ ಸ್ಥಾಪನೆಮಾಡಲು ಪ್ರಸ್ಥಾನತ್ರಯಗಳಿಗೆ ಭಾಷ್ಯಗಳನ್ನು ಬರೆಯಲು ಪ್ರಾರಂಭಮಾಡಿ ಭಗವದ್ಗೀತೆಗೆ ಭಾಷ್ಯವನ್ನು ರಚಿಸಿದರು. ಗೀತಾಭಾಷ್ಯವೇ ಶ್ರೀಮದಾಚಾರ್ಯರ ಪ್ರಥಮಗ್ರಂಥ.

ಸಂನ್ಯಾಸಾಶ್ರಮವನ್ನು ಸ್ವೀಕರಿಸಿ ಏಳು ವರ್ಷಗಳಾದ ಮೇಲೆ ಉತ್ತರ ದೇಶಕ್ಕೆ ಪ್ರಯಾಣಮಾಡಲು ಆಚಾರ್ಯರು ಸಂಕಲ್ಪಿಸಿದರು. ಇವರ ಜೊತೆಯಲ್ಲಿ ಸತ್ಯತೀರ್ಥರೆಂಬ ಮತ್ತೊಬ್ಬ ಸಂನ್ಯಾಸಿಗಳು ಹೊರಟರು. ಸತ್ಯತೀರ್ಥರಿಗೆ ಆಚಾರ್ಯರಲ್ಲಿ ಅಸಾಧಾರಣವಾದ ಭಕ್ತಿ ಇತ್ತು. ಕಾಶಿ ಗಯಾ ಮುಂತಾದ ಕ್ಷೇತ್ರಗಳನ್ನು ನೋಡಿಕೊಂಡು ಹಿಮಾಲಯದ ತಪ್ಪಲಿನಲ್ಲಿರುವ ಬದರೀ ಕ್ಷೇತ್ರವನ್ನು ಸೇರಿದರು. ಇಲ್ಲಿ ಶ್ರೀಮದಾಚಾರ್ಯರು ಅನೇಕ ದಿವಸ ಉಪವಾಸ ತಪಸ್ಸುಗಳನ್ನು ಮಾಡಿ ಏಕಾಂಗಿಯಾಗಿ ಹಿಮಾಲಯದ ಮಧ್ಯದಲ್ಲಿರುವ ವ್ಯಾಸಾಶ್ರಮಕ್ಕೆ ಹೋಗಿ ವ್ಯಾಸರ ದರ್ಶನ ಮಾಡಿ ಬಂದರೆಂದು ಪ್ರಸಿದ್ಧಿಯಿರುವುದು. ವ್ಯಾಸಾಶ್ರಮದಿಂದ ಬಂದ ಮೇಲೆ ಬ್ರಹ್ಮಸೂತ್ರಗಳಿಗೆ ಭಾಷ್ಯವನ್ನು ರಚನೆಮಾಡಿದರು. ಬದರಿಯಿಂದ ಜಗನ್ನಾಥ ಮಾರ್ಗವಾಗಿ ಗೋದಾವರೀ ತೀರಕ್ಕೆ ಬಂದರು. ಇಲ್ಲಿ ಸೋಭನಭಟ್ಟ ಮತ್ತು ಶಾಮಶಾಸ್ತ್ರಿಗಳೆಂಬ ಇಬ್ಬರು ಅದ್ವೈತವಾದಿಗಳು ಆಚಾರ್ಯರಿಂದ ವಾದದಲ್ಲಿ ಪರಾಜಿತರಾಗಿ ದ್ವೈತಮತಾವಲಂಬನೆಮಾಡಿದರು. ಸೋಭನಭಟ್ಟರು ಮತ್ತು ಶಾಮಶಾಸ್ತ್ರಿಗಳು ಆಚಾರ್ಯರಿಂದ ಸಂನ್ಯಾಸಾಶ್ರಮವನ್ನು ಪಡೆದು ಪದ್ಮನಾಭತೀರ್ಥ ಮತ್ತು ನರಹರಿತೀರ್ಥರೆಂದು ಪ್ರಸಿದ್ಧರಾದರು. ಪದ್ಮನಾಭತೀರ್ಥರು ಆಚಾರ್ಯರನ್ನು ಹಿಂಬಾಲಿಸಿ ಉಡುಪಿಗೆ ಬಂದರು. ಆಚಾರ್ಯರು ನರಹರಿತೀರ್ಥರನ್ನು ಕಳಿಂಗ ದೇಶಕ್ಕೆ ಹೋಗಿ ಗಜಪತಿರಾಜನ ಭಂಡಾರದಲ್ಲಿದ್ದ ಮೂಲಸೀತಾರಾಮರ ಪ್ರತಿಮೆಗಳನ್ನು ತರಲು ಕಳುಹಿಸಿದರು. ನರಹರಿತೀರ್ಥರು ಅನೇಕ ವರ್ಷಗಳ ಕಾಲ ಕಳಿಂಗ ದೇಶದಲ್ಲಿ ಅಮಾತ್ಯಪದವಿಯನ್ನಲ್ಲಂಕರಿಸಿ ಶ್ರೀಮದಾಚಾರ್ಯರ ಜೀವಮಾನದ ಕೊನೆಯ ದಿನಗಳಲ್ಲಿ ಅವರಿಗೆ ಆ ಪ್ರತಿಮೆಗಳನ್ನು ತಂದೊಪ್ಪಿಸಿದರು. ಶ್ರೀಕೂರ್ಮ ದೇವಸ್ಥಾನದಲ್ಲಿ ನರಹರಿತೀರ್ಥರ ವಿಷಯಕವಾದ ಶಿಲಾಶಾಸನವು ಇರುವುದು.

ಉಡುಪಿಗೆ ಬಂದ ಮೇಲೆ ಆಚಾರ್ಯರು ಅನೇಕ ವರ್ಷಗಳಕಾಲ ವೇದಾಂತ ಸಾಮ್ರಾಜ್ಯವನ್ನು ಅಲಂಕರಿಸಿ ದ್ವೈತಸಿದ್ಧಾಂತದ ತತ್ವಗಳನ್ನು ಉಪದೇಶ

ಮಾಡುತ್ತಾ, ದ್ವೈತಮತದ ಅನುಷ್ಠಾನಾಚರಣೆಗಳನ್ನು ತಮ್ಮ ನಿತ್ಯಜೀವನದಲ್ಲಿ ಪ್ರದರ್ಶಿಸುತ್ತಾ, ಇರುತ್ತಿದ್ದರು. ಇದೇ ಕಾಲದಲ್ಲಿ ಉಡುಪಿಯಲ್ಲಿ ಕೃಷ್ಣಪ್ರತಿಮೆಯನ್ನು ಸ್ಥಾಪಿಸಿ ಕೃಷ್ಣನ ಪೂಜೆಯು ಅವಿಚ್ಛಿನ್ನವಾಗಿ ನಡೆಯಲು ಏರ್ಪಾಟುಗಳನ್ನು ಮಾಡಿದರು. ಉಡುಪಿಯ ಅಷ್ಟಮಠಗಳೂ ಮಠದ ಯತಿಗಳಿಂದ ನಡೆಯುವ ಪೂಜಾಕ್ರಮವೂ ಅದ್ಯಾಪಿ ನಡೆದುಕೊಂಡು ಬಂದಿರುವುವು. ಉಡುಪಿಯಲ್ಲಿ ಒಬ್ಬ ಯಾಜ್ಞಿಕರು ಯಜ್ಞಮಾಡಬೇಕೆಂದು ಪ್ರಯತ್ನಿಸಿದಾಗ ಕಲಿಗಾಲದಲ್ಲಿ ಯಜ್ಞಪಶುವನ್ನು ವಧಿಸುವುದು ಅಯುಕ್ತವೆಂದು ಆಚಾರ್ಯರು ಪ್ರತಿಪಾದಿಸಿ ಅವರಿಂದ ಪಿಷ್ಟಪಶುವಿನ ಯಾಗವನ್ನು ಮಾಡಿಸಿದರು. ಉಡುಪಿಯಲ್ಲಿ ಇದ್ದ ಕಾಲದಲ್ಲಿ ಆಚಾರ್ಯರು ಇನ್ನೂ ಅನೇಕ ಗ್ರಂಥಗಳನ್ನು ಬರೆದರು. ಶ್ರೀಮದಾಚಾರ್ಯರು ಒಟ್ಟು ಮೂವತ್ತೇಳು ಗ್ರಂಥಗಳನ್ನು ರಚಿಸಿರುವರು. ಭಗವದ್ಗೀತೆ, ಬ್ರಹ್ಮಸೂತ್ರಗಳು ಉಪನಿಷತ್ತುಗಳು ಇವುಗಳ ಭಾಷ್ಯತಾತ್ಪರ್ಯಗಳೂ, ಪ್ರಕರಣ ಗ್ರಂಥಗಳೂ ಈ ಕಾಲದಲ್ಲಿ ರಚಿತವಾದುವುಗಳು. ಶ್ರೀಮನ್ಮಧ್ವಾಚಾರ್ಯರ ಗ್ರಂಥರಚನೆಯು ಇತರ ಆಚಾರ್ಯರ ಗ್ರಂಥರಚನೆಗಿಂತ ಬಹಳ ವಿಲಕ್ಷಣವಾದುದು. ಅವರ ಗ್ರಂಥಗಳೆಲ್ಲವೂ ಸೂತ್ರಪ್ರಾಯವಾಗಿ ಬಹಳ ಅರ್ಥಗರ್ಭಿತಗಳಾಗಿಯೂ ಗಂಭೀರವಾಗಿಯೂ ಇರುವುವು. ಸಂಪ್ರದಾಯವನ್ನು ಬಲ್ಲ ಗುರುಗಳ ಉಪದೇಶದಿಂದಲೇ ಅವರ ಗ್ರಂಥಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯ. ಅವರ ಗ್ರಂಥಗಳನ್ನು ನೋಡಿದರೆ ಅವರಿಗೆ ವೇದ ಪುರಾಣಗಳು, ವ್ಯಾಕರಣ ಮತ್ತು ತರ್ಕಶಾಸ್ತ್ರಗಳಲ್ಲಿ ಎಷ್ಟು ನಿಸ್ಸೀಮವಾದ ಪಾಂಡಿತ್ಯವಿತ್ತೆಂಬುದು ವ್ಯಕ್ತವಾಗುವುದು. ಶಬ್ದಾಡಂಬರ, ಅಲಂಕಾರಪ್ರಯೋಗ ಮುಂತಾದುವುಗಳು ಇವರ ಗ್ರಂಥಗಳಲ್ಲಿ ಕಂಡುಬರುವುದಿಲ್ಲ. ಇತಿಹಾಸ ಪುರಾಣಗಳಿಂದ ಪುಂಖಾನುಪುಂಖವಾಗಿ ಪ್ರಮಾಣಗಳನ್ನು ಉದಾಹರಿಸಿರುವುದನ್ನು ನೋಡಿದರೆ ಇವರ ಮತವು ಅತ್ಯಂತ ಪ್ರಾಚೀನಕಾಲದಲ್ಲಿಯೂ ಪ್ರಸಿದ್ಧವಾಗಿತ್ತೆಂದು ಗೊತ್ತಾಗುವುದು.

ಕೆಲವು ಕಾಲದ ತರುವಾಯ ಪುನಃ ಉತ್ತರ ದೇಶದಲ್ಲಿ ಪ್ರಯಾಣಮಾಡಿ ವೇದವ್ಯಾಸರ ಆಶ್ರಮವನ್ನು ನೋಡಿಬರಬೇಕೆಂದು ಶ್ರೀಮದಾಚಾರ್ಯರಿಗೆ ಅಭಿಲಾಷೆಯಾಯಿತು. ಉತ್ತರ ದೇಶದ ಯಾತ್ರೆಯು ಕೇವಲ ದಿಗ್ವಿಜಯ ಯಾತ್ರೆಯೇ ಆಯಿತು. ಶ್ರೀಮದಾಚಾರ್ಯರ ಜೀವನಚರಿತ್ರೆಗೆ ನಾರಾಯಣ ಪಂಡಿತಾಚಾರ್ಯರೆಂಬವರಿಂದ ರಚಿತವಾದ ಮಧ್ವವಿಜಯವೆಂಬ ಗ್ರಂಥವೇ ಆಧಾರ. ನಾರಾಯಣ ಪಂಡಿತಾಚಾರ್ಯರು ಆಚಾರ್ಯರ ಶಿಷ್ಯರಾದ ತ್ರಿವಿಕ್ರಮ ಪಂಡಿತಾಚಾರ್ಯರ ಮಕ್ಕಳು. ಆದುದರಿಂದ ಅವರು ತಮ್ಮ ಬಾಲ್ಯದಲ್ಲಿ ಶ್ರೀಮದಾಚಾರ್ಯರನ್ನು ನೋಡಿದ್ದರೂ ಇರಬಹುದು. ಮಧ್ವವಿಜಯದಲ್ಲಿ ಶ್ರೀಮದಾಚಾರ್ಯರು ನಡೆಸಿದ ಅನೇಕ

ಅಮಾನುಷ ವ್ಯಾಪಾರಗಳು ವರ್ಣಿತವಾಗಿವೆ. ಒಂದು ಊರಿನಲ್ಲಿ ವೇದಪ್ರಾಮಾಣ್ಯ ವಿಷಯದಲ್ಲಿ ಚರ್ಚೆಬಂದಾಗ ವೇದಘೋಷದಿಂದ ಬೀಜಗಳು ಮೊಳಕೆಯಾಗುವಂತೆ ಮಾಡಬಹುದೆಂಬುದನ್ನು 'ಯಾ ಓಷಧೀ' ಎಂಬ ಸೂಕ್ತವನ್ನು ಹಾಡಿ ಬೀಜಗಳು ಮೊಳಕೆಯಾಗುವುದನ್ನು ತೋರಿಸಿದರು. ಅನೇಕ ಸಂದರ್ಭಗಳಲ್ಲಿ ತಮ್ಮ ಅಪಾರವಾದ ಬಾಹುಬಲವನ್ನು ಪ್ರದರ್ಶನ ಮಾಡುತ್ತಿದ್ದರು. ಶ್ರೀಮದಾಚಾರ್ಯರು ತಮ್ಮ ಗ್ರಂಥಗಳಲ್ಲಿ ತಾವು ವಾಯುದೇವರ ಅವತಾರವೆಂದೂ ಹನುಮ, ಭೀಮ, ಮತ್ತು ಮಧ್ವ ಎಂದು ತಮಗೆ ಮೂರು ಅವತಾರಗಳೆಂದೂ ಹೇಳಿಕೊಂಡಿರುವರು. ಹನುಮಂತನ ವ್ಯಾಕರಣ ಕೌಶಲ್ಯವನ್ನು ತಮ್ಮ ಗ್ರಂಥಗಳಲ್ಲಿಯೂ ಭೀಮಸೇನನ ದೇಹಶಕ್ತಿಯನ್ನು ತಮ್ಮ ಜೀವನದಲ್ಲಿಯೂ ಪ್ರದರ್ಶನಮಾಡಿದರು. ಉತ್ತರದೇಶದ ಪ್ರವಾಸಕಾಲದಲ್ಲಿ ಜಲಾಲುದ್ದೀನ್ ಖಿಲ್ಜಿಯನ್ನು ಸಂದರ್ಶಿಸಿದರೆಂದು ಕಂಡುಬರುವುದು.

ಉತ್ತರದೇಶದ ಯಾತ್ರೆಯನ್ನು ಮುಗಿಸಿಕೊಂಡು ಉಡುಪಿಗೆ ಬಂದಮೇಲೆ ಅನೇಕ ವರ್ಷಗಳ ಕಾಲ ಉಡುಪಿಯಲ್ಲಿಯೇ ಶ್ರೀಮದಾಚಾರ್ಯರು ಕಾಲಕಳೆದರು. ಉಡುಪಿಗೆ ಹತ್ತಿರದಲ್ಲಿರುವ ಕುಂಬಳಗ್ರಾಮವೆಂಬ ಊರಿನಲ್ಲಿದ್ದ ಜಯಸಿಂಹನೆಂಬ ರಾಜನು ಶ್ರೀಮದಾಚಾರ್ಯರಲ್ಲಿ ಬಹಳ ಭಕ್ತಿ ಇಟ್ಟಿದ್ದನು. ಅನೇಕಸಲ ಈ ರಾಜನ ಆತಿಥ್ಯವನ್ನು ಸ್ವೀಕರಿಸಲು ವಿಷ್ಣುಮಂಗಲವೆಂಬ ಗ್ರಾಮಕ್ಕೆ ಶ್ರೀಮದಾಚಾರ್ಯರು ಹೋಗುತ್ತಿದ್ದರು. ವಿಷ್ಣುಮಂಗಲದಲ್ಲಿ ಒಮ್ಮೆ ತ್ರಿವಿಕ್ರಮ ಪಂಡಿತಾಚಾರ್ಯರೆಂಬ ಉದ್ದಾಮಪಂಡಿತರು ಶ್ರೀಮದಾಚಾರ್ಯರೊಡನೆ ಹದಿನೈದು ದಿವಸ ವಾದಮಾಡಿ ಪರಾಜಯಹೊಂದಿ ಅವರ ಶಿಷ್ಯತ್ವವನ್ನು ಪಡೆದರು. ಅದ್ವೈತಮತದಲ್ಲಿ ದೀಕ್ಷೆಯುಳ್ಳವರಾಗಿ ಮಾಯಾವಾದಿಗಳಿಗೆ ಆಧಾರಸ್ತಂಭದಂತಿದ್ದ ತ್ರಿವಿಕ್ರಮ ಪಂಡಿತಾಚಾರ್ಯರು ದ್ವೈತಮತಾವಲಂಬನೆಯನ್ನು ಮಾಡಿದ್ದು ಈ ಮತಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ತಂದಿತು. ಪಂಡಿತಾಚಾರ್ಯರಿಗೆ ಆಚಾರ್ಯರಲ್ಲಿ ನಿಸ್ಸೀಮವಾದ ಭಕ್ತಿ ಇತ್ತು; ಅವರ ಆಜ್ಞಾನುಸಾರವಾಗಿ ಅವರ ಸೂತ್ರಭಾಷ್ಯಕ್ಕೆ 'ತತ್ವಪ್ರದೀಪ'ವೆಂಬ ವ್ಯಾಖ್ಯಾನವನ್ನು ರಚಿಸಿದರು. ಬ್ರಹ್ಮಸೂತ್ರಗಳಿಗೆ ಅರ್ಥವು ಇನ್ನೂ ವಿಶದವಾಗುವಂತೆ ಬೇರೊಂದು ವ್ಯಾಖ್ಯಾನವನ್ನು ರಚಿಸಬೇಕೆಂದು ತ್ರಿವಿಕ್ರಮ ಪಂಡಿತಾಚಾರ್ಯರಿಂದ ಪ್ರಾರ್ಥಿಸಲ್ಪಟ್ಟು ಶ್ರೀಮದಾಚಾರ್ಯರು 'ಅನುವ್ಯಾಖ್ಯಾನ'ವೆಂಬ ಗ್ರಂಥವನ್ನು ರಚಿಸಿದರು. ಶ್ರೀಮನ್ಮಧ್ವಾಚಾರ್ಯರು ದ್ವೈತಮತದ ತತ್ವಗಳನ್ನು ಅನೇಕ ವರ್ಷಗಳ ಕಾಲ ಬೋಧಿಸಿ ತಮ್ಮ ಶಿಷ್ಯರಲ್ಲಿ ಅತ್ಯಂತ ಪ್ರೀತಿಗೆ ಪಾತ್ರರಾದ ಪದ್ಮನಾಭ ತೀರ್ಥರನ್ನು ತಮ್ಮ ಪೀಠದಲ್ಲಿ ನಿಯಮಿಸಿ ತಮ್ಮ ಎಂಬತ್ತನೆಯ ವರ್ಷದ ವಯಸ್ಸಿನಲ್ಲಿ ತಮ್ಮ ಅವತಾರಕಾರ್ಯವನ್ನು ಪೂರೈಸಿದರು. ಪಿಂಗಳನಾಮ ಸಂವತ್ಸರದ

ಮಾಘ ಶುದ್ಧ ನವಮಿಯ ದಿನ ತಮ್ಮ ಶಿಷ್ಯರುಗಳಿಗೆ ತನಗೆ ಬಹಳ ಪ್ರಿಯವಾಗಿದ್ದ ಐತರೇಯ ಉಪನಿಷತ್ತನ್ನು ಪಾಠ ಹೇಳುತ್ತಿರುವಾಗ ಅವರು ಕುಳಿತಿದ್ದ ಸ್ಥಳದಲ್ಲಿ ಪುಷ್ಪವೃಷ್ಟಿಯಾಗಿ ಅವರು ಅಂತರ್ಧಾನರಾದರು. ಶ್ರೀಮನ್ಮಧ್ವಾಚಾರ್ಯರು ವೇದ ವ್ಯಾಸಾಶ್ರಮದಲ್ಲಿ ಈಗಲೂ ಇರುವರೆಂದು ಎಲ್ಲಾ ಆಸ್ತಿಕಮಾಧ್ವರೂ ನಂಬಿರುವರು.

ಶ್ರೀಮನ್ಮಧ್ವಾಚಾರ್ಯರು ಒಟ್ಟು ಮೂವತ್ತೇಳು ಗ್ರಂಥಗಳನ್ನು ರಚಿಸಿರುವ ರೆಂದು ಹಿಂದೆಯೇ ಹೇಳಿದೆ. ಇವುಗಳಲ್ಲಿ ಸೂತ್ರಪ್ರಸ್ಥಾನದ ಮೇಲೆ ನಾಲ್ಕು ಗ್ರಂಥಗಳೂ, ಗೀತಾಪ್ರಸ್ಥಾನದ ಮೇಲೆ ಎರಡು ಗ್ರಂಥಗಳೂ, ಉಪನಿಷತ್ಪ್ರಸ್ಥಾನದ ಮೇಲೆ ಹತ್ತು ಗ್ರಂಥಗಳೂ ಇರುವುವು; ಮಹಾಭಾರತದ ಮತ್ತು ಭಾಗವತದ ತಾತ್ಪರ್ಯಗಳನ್ನು ನಿರ್ಣಯಮಾಡಲು ಎರಡು ಗ್ರಂಥಗಳು ಇರುವುವು; ದ್ವೈತ ಸಿದ್ಧಾಂತದ ಮುಖ್ಯತತ್ವಗಳಾದ ವಿಷ್ಣುಸರ್ವೋತ್ತಮತ್ವ, ಜಗತ್ಸತ್ಯತ್ವ ಮುಂತಾದ ಒಂದೊಂದು ತತ್ವಗಳನ್ನೇ ಪೃಥಕ್ಕಾಗಿ ವಿಚಾರಮಾಡಿ ಸ್ಥಾಪಿಸುವ 'ವಿಷ್ಣುತತ್ವವಿ ನಿರ್ಣಯ' 'ಮಿಥ್ಯಾತ್ವಾನುಮಾನಖಂಡನ,' 'ಉಪಾಧಿಖಂಡನ' ಮುಂತಾದ ಹತ್ತು ಪ್ರಕರಣ ಗ್ರಂಥಗಳು ಇರುವುವು; ಋಗ್ವೇದದ ಋಕ್ಕುಗಳು ವಿಷ್ಣುವನ್ನು ಹೇಗೆ ಸರ್ವೋತ್ತಮನೆಂದು ಪ್ರತಿಪಾದಿಸುತ್ತವೆ ಎಂಬುದನ್ನು ತೋರಿಸುವ 'ಋಗ್ಭಾಷ್ಯ' ವೆಂಬ ಗ್ರಂಥವು ಇರುವುದು; ಭಗವಂತನ ಉಪಾಸನೆ ಮತ್ತು ಪೂಜಾಕ್ರಮಗಳನ್ನು ಹೇಳುವ 'ತಂತ್ರಸಾರ'ವೆಂಬ ಗ್ರಂಥವು ಇರುವುದು; ಕೊನೆಯವುಗಳಾಗಿ ಸ್ತೋತ್ರ ರೂಪವಾದ ಏಳು ಗ್ರಂಥಗಳು ಇರುವುವು. ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯ ರಾದ ಪದ್ಮನಾಭತೀರ್ಥರು, ನರಹರಿತೀರ್ಥರು, ತ್ರಿವಿಕ್ರಮ ಪಂಡಿತಾಚಾರ್ಯರುಗಳು ಆಚಾರ್ಯರ ಕೆಲವು ಗ್ರಂಥಗಳಿಗೆ ಟೀಕೆಗಳನ್ನು ರಚಿಸಿರುವರು. ಇವುಗಳಿಗೆ ಪ್ರಾಚೀನ ಟೀಕೆಗಳೆಂದು ಹೆಸರು. ಇವುಗಳಲ್ಲಿ ಪದ್ಮನಾಭತೀರ್ಥರಿಂದ ರಚಿತವಾದ 'ಸತ್ತರ್ಕದೀಪಾವಳೀ,' 'ಸನ್ನ್ಯಾಯರತ್ನಾವಳೀ' ಮತ್ತು ತ್ರಿವಿಕ್ರಮ ಪಂಡಿತಾಚಾ ರ್ಯರಿಂದ ರಚಿತವಾದ 'ತತ್ವಪ್ರದೀಪ'ವೆಂಬ ಗ್ರಂಥಗಳು ಈಗಲೂ ಪ್ರಸಿದ್ಧವಾಗಿವೆ.

ದ್ವೈತಮತದ ಅಭಿವೃದ್ಧಿಗೂ ಮತ್ತು ಗ್ರಂಥದ ಬೆಳವಣಿಗೆಗೂ ಮುಖ್ಯಕಾರಣರು ಶ್ರೀ ಜಯತೀರ್ಥರು, ಶ್ರೀ ವ್ಯಾಸತೀರ್ಥರು ಮತ್ತು ಶ್ರೀ ರಾಘವೇಂದ್ರತೀರ್ಥರು. ಶ್ರೀ ಜಯತೀರ್ಥರು ಕ್ರಿ. ಶ. ೧೪ನೆಯ ಶತಮಾನದ ಅಂತ್ಯಭಾಗದಲ್ಲಿದ್ದವರು. ಶ್ರೀಮದಾಚಾರ್ಯರ ಗ್ರಂಥಗಳನ್ನು ಸರ್ವಮೂಲಗಳೆಂದು ಕರೆಯುವರು. ಶ್ರೀ ಜಯ ತೀರ್ಥರು ಸರ್ವ ಮೂಲಗಳಿಗೆ ೧೮ ಟೀಕೆಗಳನ್ನೂ ಸ್ವತಂತ್ರವಾದ ಮೂರು ಗ್ರಂಥ ಗಳನ್ನೂ ರಚಿಸಿರುವರು. ಇವುಗಳಲ್ಲಿ ಬ್ರಹ್ಮಸೂತ್ರ ಭಾಷ್ಯಕ್ಕೆ 'ತತ್ವಪ್ರಕಾಶಿಕಾ' ಎಂಬ ಟೀಕೆಯೂ ಅನುವ್ಯಾಖ್ಯಾನಕ್ಕೆ 'ನ್ಯಾಯಸುಧಾ' ಎಂಬ ಟೀಕೆಯೂ ಬಹಳ ಪ್ರಸಿದ್ಧ

ವಾದವುಗಳು. ಶ್ರೀ ಜಯತೀರ್ಥರ ಟೀಕೆಗಳು ಅತ್ಯಂತ ಗಂಭೀರವಾಗಿಯೂ ಲಲಿತ ವಾಗಿಯೂ ಮತ್ತು ಯುಕ್ತಿಯುಕ್ತಗಳಾಗಿಯೂ ಇರುವುವು. ಶ್ರೀ ಜಯತೀರ್ಥರು ಟೀಕಾಚಾರ್ಯರೆಂದೇ ಪ್ರಸಿದ್ಧರಾಗಿರುವರು. ಶ್ರೀ ಜಯತೀರ್ಥರ ಗ್ರಂಥಗಳಲ್ಲಿ 'ನ್ಯಾಯಸುಧಾ' ಎಂಬ ಗ್ರಂಥವು ಅತ್ಯಂತ ಪೂಜ್ಯಸ್ಥಾನವನ್ನು ಪಡೆದಿದೆ. ಸುಧಾಗ್ರಂಥ ವನ್ನು ಪಾಠಮಾಡಿದವರು ದ್ವೈತಮತದಲ್ಲಿ ಅತ್ಯಂತ ಮಾನನೀಯರು. ದ್ವೈತಮತದ ಪ್ರಾಶಸ್ತ್ಯ ಮತ್ತು ಬೆಳವಣಿಗೆಗೆ ಶ್ರೀ ಜಯತೀರ್ಥರ ಸಹಾಯವು ಎಣಿಸಲು ಶಕ್ಯವಲ್ಲ.

ಶ್ರೀ ವ್ಯಾಸತೀರ್ಥರು ಕ್ರಿ. ಶ. ೧೫ನೆಯ ಶತಮಾನದಲ್ಲಿದ್ದವರು. ಇವರು ಆ ಕಾಲ ದಲ್ಲಿ ವಾದಗ್ರಂಥಗಳು ಹೆಚ್ಚಾಗಿ ಪ್ರಚಾರದಲ್ಲಿದ್ದುದರಿಂದ ಕಾಲಾನುಗುಣವಾಗಿ ವಾದಗ್ರಂಥಗಳನ್ನೇ ಬರೆದರು. ಅವುಗಳಲ್ಲಿ 'ತತ್ವಪ್ರಕಾಶಿಕಾ' ಎಂಬ ಟೀಕೆಗಳಿಗೆ ವ್ಯಾಖ್ಯಾನವಾದ 'ಚಂದ್ರಿಕಾ' ಮತ್ತು ಸ್ವತಂತ್ರ ಗ್ರಂಥಗಳಾದ 'ನ್ಯಾಯಾಮೃತ' ಮತ್ತು 'ತರ್ಕತಾಂಡವ' ಎಂಬ ಮೂರು ಗ್ರಂಥಗಳು ವ್ಯಾಸತ್ರಯಗಳೆಂದು ಪ್ರಸಿದ್ಧವಾಗಿವೆ. ಶ್ರೀ ವ್ಯಾಸತೀರ್ಥರು ಚಂದ್ರಿಕಾರಾಯರೆಂಬುದಾಗಿಯೂ ಪ್ರಸಿದ್ಧ ರಾಗಿರುವರು. ವ್ಯಾಸತ್ರಯಗಳನ್ನು ಪಾಠಹೇಳುವ ಪಾಂಡಿತ್ಯ ಉಳ್ಳವರು ದ್ವೈತ ವೇದಾಂತದಲ್ಲಿ ಪಂಡಿತೋತ್ತಮರೆಂದು ಪರಿಗಣಿಸಲ್ಪಡುವರು.

ಶ್ರೀ ರಾಘವೇಂದ್ರತೀರ್ಥರು ಕ್ರಿ. ಶ. ೧೭ನೆಯ ಶತಮಾನದಲ್ಲಿದ್ದರು. ಶ್ರೀ ನ್ಯಾಯಸುಧೆಗೆ 'ಪರಿಮಳ' ಎಂಬ ವ್ಯಾಖ್ಯಾನವೂ ಭಗವದ್ಗೀತೆಗೆ 'ವಿವೃತ್ತಿ' ಎಂಬ ವ್ಯಾಖ್ಯಾನವೂ ಇವರ ಗ್ರಂಥಗಳಲ್ಲಿ ಮುಖ್ಯವಾದವುಗಳು. ಇವರು ಒಟ್ಟು ೪೪ ಗ್ರಂಥಗಳನ್ನು ರಚಿಸಿರುವರೆಂದು ಕಂಡುಬಂದಿದೆ. ಶ್ರೀ ಜಯತೀರ್ಥರ ಟೀಕೆಗಳಿಗೆ ವ್ಯಾಖ್ಯಾನಗಳು ಇವರಿಂದ ರಚಿತವಾಗಿವೆ. ಚತುರ್ವೇದಗಳಿಗೂ ಇವರು ಭಾಷ್ಯ ಗಳನ್ನು ರಚಿಸಿರುವರೆಂದು ಪ್ರಸಿದ್ಧಿ ಇರುವುದು. ಆದರೆ ಅವು ಎಲ್ಲಿಯೂ ದೊರಕಿಲ್ಲ. ಜೈಮಿನಿಯ ಪೂರ್ವಮೀಮಾಂಸಾ ಸೂತ್ರಗಳಿಗೆ 'ಭಟ್ಟಸಂಗ್ರಹಮೀಮಾಂಸಾ' ಎಂಬ ಭಾಷ್ಯವನ್ನು ರಚಿಸಿರುವರು. ಶ್ರೀ ರಾಘವೇಂದ್ರತೀರ್ಥರು ಮಧ್ವಮತಾನು ಯಾಯಿಗಳಿಗೆ ಪರಮ ಪೂಜ್ಯರು. ಇವರ ಹೆಸರನ್ನು ಕೇಳದ ಮತ್ತು ಇವರಲ್ಲಿ ಭಕ್ತಿ ಮಾಡದ ಮಾಧ್ವರು ಅಪರೂಪವೆಂದೇ ಹೇಳಬಹುದು.

ದ್ವೈತಸಿದ್ಧಾಂತದ ಮುಖ್ಯಪ್ರಮೇಯಗಳು

ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ ತತ್ವತಃ
ಭೇದೋ ಜೀವಗಣಾಃ ಹರೇರನುಚರಾಃ ನೀಚೋಚ್ಚಭಾವಂ ಗತಾಃ |
ಮುಕ್ತಿರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ
ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾಮ್ನಾಯೈಕವೇದ್ಯೋ ಹರಿಃ ||

ಎಂಬ ಶ್ರೀ ವ್ಯಾಸತೀರ್ಥರಿಂದ ರಚಿತವಾದ ಶ್ಲೋಕದಲ್ಲಿ ಸಂಗ್ರಹಿಸಲ್ಪಟ್ಟಿರುವುವು. ಸ್ವತಂತ್ರ ಮತ್ತು ಅಸ್ವತಂತ್ರ ಎಂದು ತತ್ವವು ಎರಡು ವಿಧ; ಸಮಸ್ತ ಕಲ್ಯಾಣ ಗುಣ ಪರಿಪೂರ್ಣನಾದ ಶ್ರೀಮನ್ನಾರಾಯಣನೇ ಸ್ವತಂತ್ರ ತತ್ವ; ಚೇತನಾ ಚೇತನರೇ ಅಸ್ವತಂತ್ರತತ್ವ. ಸ್ವತಂತ್ರತತ್ವವು ಹೇಗೆ ಸತ್ಯವೋ ಹಾಗೆಯೇ ಚೇತನಾ ಚೇತನ ರೂಪವಾದ ಅಸ್ವತಂತ್ರತತ್ವವೂ ಸತ್ಯವಾದದ್ದು; ಆದುದರಿಂದ ಚೇತನಾ ಚೇತನ ಪ್ರಪಂಚವು ಸತ್ಯವಾದದ್ದೇ ಹೊರತು ಮಾಯಾಕಲ್ಪಿತವಾದುದಲ್ಲ. ಚೇತನರು ಅನಂತರು ಮತ್ತು ಪರಸ್ಪರ ಭಿನ್ನರು; ಸ್ವರೂಪತಃ ತರತಮ ಭಾವವುಳ್ಳವರು; ಎಲ್ಲರೂ ಶ್ರೀಹರಿಯ ಅಧೀನರು. ಮೋಕ್ಷ ಎಂದರೆ ಚೇತನ ಸ್ವರೂಪವಾದ ಆನಂದ ಜ್ಞಾನಗಳ ಆವಿರ್ಭಾವವೇ ಹೊರತು ಅನಂತಗುಣ ಪರಿಪೂರ್ಣವಾದ ಪರಬ್ರಹ್ಮ ಭಾವವನ್ನು ಹೊಂದುವುದಲ್ಲ. ಎಲ್ಲಾ ಜೀವರುಗಳೂ ಮೋಕ್ಷವನ್ನು ಹೊಂದಲು ಅರ್ಹತೆ ಉಳ್ಳವರಲ್ಲ; ಜೀವರು ಮುಕ್ತಿಯೋಗ್ಯರು, ನಿತ್ಯಸಂಸಾರಿಗಳು ಮತ್ತು ತಮೋಯೋಗ್ಯರೆಂದು ಮೂರು ವಿಧ; ಮುಕ್ತಿಯೋಗ್ಯರು ಮಾತ್ರ ಮೋಕ್ಷವನ್ನು ಹೊಂದುವರು. ಮೋಕ್ಷವನ್ನು ಹೊಂದಲು ಪರಮಾತ್ಮನ ಪ್ರಸಾದವೇ ಮುಖ್ಯಕಾರಣ; ಪರಮಾತ್ಮನ ಪ್ರಸಾದವನ್ನು ಸಂಪಾದಿಸಲು ಅವನಲ್ಲಿ ಅನನ್ಯವಾದ ಭಕ್ತಿಯನ್ನು ಮಾಡಬೇಕು; ಭಕ್ತಿ ಎಂದರೆ 'ಮಾಹಾತ್ಮ್ಯಜ್ಞಾನಪೂರ್ವಸ್ತು ಸುದೃಢಃ ಸರ್ವತೋಧಿಕಃ ಸ್ನೇಹಃ'—ಪರಮಾತ್ಮನ ಸರ್ವೋತ್ತಮತ್ವಾದಿಗಳ ಜ್ಞಾನವನ್ನು ಸರಿಯಾಗಿ ತಿಳಿದು ದಾರ್ಢ್ಯಬುದ್ಧಿಯಿಂದ ಅವನಲ್ಲಿ ಮಾಡತಕ್ಕ ಸ್ನೇಹರೂಪವಾದ ಅಭಿಮಾನ; ಮಾಹಾತ್ಮ್ಯಜ್ಞಾನವು ಶಾಸ್ತ್ರವಿಮರ್ಶೆಯಿಂದ ಉಂಟಾಗುವುದು. ತತ್ವಗಳು ಪ್ರಮಾಣಗಳಿಂದ ತಿಳಿಯಲು ಯೋಗ್ಯಗಳು; ಪ್ರತ್ಯಕ್ಷ, ಅನುಮಾನ, ಆಗಮ (ಶಾಸ್ತ್ರ) ಎಂಬುದಾಗಿ ಪ್ರಮಾಣವು ಮೂರು ವಿಧ; ಅಚೇತನಪದಾರ್ಥಗಳು ಬಾಹ್ಯ ಪ್ರತ್ಯಕ್ಷದಿಂದ ಸಿದ್ಧವಾಗುವುವು; 'ನಾನು' ಎಂಬ ಆಂತರಾನುಭವದಲ್ಲಿ ಜೀವನು ಸಿದ್ಧಿಸುವನು; ಪರಸ್ಪರ ಅನುಭವಭೇದದಿಂದ ಜೀವಗಳಿಗೆ ಪರಸ್ಪರ ಭೇದವಿರುವುದು ಎಂದು ಅನುಮಾನದಿಂದ ಸಿದ್ಧಿಸುವುದು. ಸ್ವತಂತ್ರನಾದ ಶ್ರೀ ಹರಿ ಎಂಬ ತತ್ವವು ಅಪೌರುಷೇಯವಾದ ವೇದಗಳಿಂದ ಮಾತ್ರವೇ ಸಿದ್ಧಿಸುವುದು.

ಬಿ. ಎ. ಕೃಷ್ಣಸ್ವಾಮಿರಾವ್.

---

# ಕವಿಕಥೆ

ಒಂದುಸಲ ಅವ್ವೈಯಾರು ಕಾಡುದಾರಿಯಲ್ಲಿ ಹೋಗುತ್ತಿರುವಾಗ ಬಿಸಿಲಿನ ಉರುಬನ್ನು ತಾಳಲಾರದೆ ದಾರಿಯ ಪಕ್ಕದಲ್ಲಿದ್ದ ಒಂದು ನೇರಿಳೆ ಮರದ ಬುಡದಲ್ಲಿ ಕುಳಿತರು. ಆ ಮರದ ಮೇಲೆ ಒಬ್ಬ ಕುರುಬ ಹುಡುಗನು ನೇರಿಳೆ ಹಣ್ಣನ್ನು ಕಿತ್ತು ತಿನ್ನುತ್ತಿದ್ದನು. ಅವನನ್ನು ನೋಡಿ ಅವ್ವೈಯಾರು "ಅಪ್ಪಾ ನನಗೂ ಒಂದೆರಡು ಹಣ್ಣು ಕೊಡುವೆಯಾ ?" ಎಂದು ಕೇಳಿದರು. ಅವನು "ಅಜ್ಜಿ, ನಿನಗೆ ಬಿಸಿ ಹಣ್ಣು ಬೇಕೆ ? ಆರಿದ ಹಣ್ಣು ಬೇಕೆ ?" ಎಂದು ಕೇಳಿದನು. ಅದಕ್ಕೆ ಅವರು "ಬಿಸಿ ಹಣ್ಣೇ ಹಾಕು" ಎನ್ನಲು, ಆ ಹುಡುಗನು ಚೆನ್ನಾಗಿ ಪಕ್ವವಾದ ಹಣ್ಣುಗಳು ಕೆಳಗಿದ್ದ ಮರಳಿಗೆ ಬೀಳುವಂತೆ ಮರದ ಕೊಂಬೆಯನ್ನಲ್ಲಾಡಿಸಿದನು. ಹಣ್ಣುಗಳು ಕೆಳಗೆ ಬಿದ್ದ ಒಡನೆಯೇ ಅವ್ವೈಯಾರು ಆ ಹಣ್ಣುಗಳನ್ನು ಆರಿಸಿ ಮರಳು ಹೋಗುವಂತೆ ಅವುಗಳನ್ನು ಉರುವಿ ಉರುವಿ ತಿಂದರು. ಅದನ್ನು ಕಂಡ ಆ ಹುಡುಗನು "ಅಜ್ಜಿ, ಹಣ್ಣು ಬಹಳ ಬಿಸಿ ; ನಾಲಗೆ ಸುಡದ ಹಾಗೆ ಚೆನ್ನಾಗಿ ಉರುವಿ ತಿನ್ನು !" ಎಂದು ಹೇಳಿದನು. ಅದನ್ನು ಕೇಳಿದ ಅವ್ವೈಯಾರು ನಾಚಿಕೆಯಿಂದ ಬಹಳ ದುಃಖಿತರಾಗಿ "ಏನೂ ತಿಳಿಯದ ಈ ಚಿಕ್ಕ ಹುಡುಗನಿಗೆ ನಾನು ಸೋತೆನೆ !" ಎಂದುಕೊಂಡು

"ಕಗ್ಗಲಿಯ ಮರವನ್ನು ಕಡಿದು ಕೆಡದಾ ಕೊಡಲಿ
ಬಾಳೆದಿಂಡನು ಕಡಿದು ಬಾಯ್ಕೆಳೆದುಕೊಂಡಂತೆ,
ಕಾಡೊಳಗೆ ಎಮ್ಮೆ ಕಾಯುವ ಕುರುಬಹುಡುಗನಿಗೆ
ನಾ ಸೋತೆ. ಇನ್ನೆರಡು ದಿನ ನನಗೆ ನಿದ್ರೆ ಬರದು."

ಎಂದು ಹಾಡಿದರು.

ಇದನ್ನು ಕೇಳಿ ಹುಡುಗನು ಮರದಿಂದ ಕೆಳಗಿಳಿದು ಬಂದು ಅವರ ಕೈಹಿಡಿದು "ನೀವು ವ್ಯಥೆಪಡಬಾರದು. ನಾನು ನಿಮ್ಮಲ್ಲಿ ವಿನೋದವಾಡಲು ಬಂದ ಕುಮಾರ ಸ್ವಾಮಿ. ನಿಮಗಿಂತ ದೊಡ್ಡ ಕವಿ ಯಾರಿದ್ದಾರೆ !" ಎಂದು ಹೇಳಿದನು. ಇದನ್ನು ಕೇಳಿ ಅವ್ವೈಯಾರು ಸಮಾಧಾನಗೊಂಡರು.

ಕೆ. ವೆಂಕಟರಾಮಪ್ಪ

# ಕಾಡಾನೆ

(ಒಂದು ಪ್ರಹಸನ)

ಬರೆದವರು :
ನಾ. ಕಸ್ತೂರಿ, ಎಂ.ಎ., ಬಿ.ಎಲ್.
ಮೈಸೂರು

೧೯೪೨

[ಪಿ. ಜಿ. ವೋಡ್ಹಾಸ್‌ರವರಿಂದ ಪ್ರೇರಿತ]

# ಕಾಡಾನೆ

ಸ್ಥಳ : ಜಂಗಳೂರು.

ಕಾಲ : ಒಂದುದಿನ ಸಂಜೆ ೫-೩೦ರಿಂದ ೮ರ ವರೆಗೆ.

---

## ಪಾತ್ರವಿವರ

| | | |
|---|---|---|
| ವೆಂಕಣ್ಣ | .... | ತಾಲ್ಲೂಕ್ ಆಫೀಸ್ ಗುಮಾಸ್ತೆಯರು |
| ಶಾಮರಾಯ | .... | |
| ರಾಮಸ್ವಾಮಿ | .... | |
| ನರಶಿಂಗರಾಯರು | .... | ಎ.ಸಿ.ಯಾಗಿ ಹೊರಡಲಿರುವ ಅಮಲ್ದಾರ್ |
| ನರಸಮ್ಮ | .... | ಅವರ ಧರ್ಮಪತ್ನಿ |
| ರಾಮು | .... | ವಿದ್ಯಾರ್ಥಿಗಳು |
| ಕಿಟ್ಟು | .... | |
| ಕೇಶವಯ್ಯ | .... | ಹೆಡ್ಮೇಷ್ಟ್ರು |
| ಡಿ.ಸಿ. | .... | ದೊಡ್ಡ ಸಾಹೇಬರು |
| ಗುಂಡುಪಂಡಿತ | .... | ನರಶಿಂಗರಾಯರಿಗೆ ದೂರದ ಸಂಬಂಧ |
| ಜೀ. ಎ. ಪಂಡಿತ | .... | ಆತನ ಮಗ |
| | | [ದಫೇದಾರ, ಜವಾನ.] |

# ಕಾ ಡಾ ನೆ

## ದೃಶ್ಯ ೧

### ಸಂಜೆ ೫-೩೦ ; ಜಂಗಳೂರಿನ ಒಂದು ಬೀದಿ

[೨೦, ೨೨ತ್ತಿ, ೨೪ ರೂಪಾಯಿ ಸಂಬಳದ ಮೂವರು ಗುಮಾಸ್ತೆಯರು; ಎಂದೂ ಇಲ್ಲದ ಸಂತೋಷ. ತಾ|| ೨೮ ಆದರೂ ನಗುಮೊಗಗಳು !]

ವೆಂಕಣ್ಣ—ಅಂತು ಇಂತು, ಶನಿ ತೊಲಗಿತು !

ಶಾಮರಾಯ—ದೇವರು ದೊಡ್ಡವನು ! ವೆಂಕಣ್ಣ !

ರಾಮಸ್ವಾಮಿ—ಓ ! ದೇವರು ಅಂದಾಗ ನೆನಪಾಯಿತು. ಹನುಮಂತರಾಯನಿಗೆ ಹಣ್ಣು ಕಾಯಿ ಹರಕೆ ಹೊತ್ತಿದ್ದೆ, ಶಾಮೂ !

ಶಾಮರಾಯ—ಹಣ್ಣು ಕಾಯಿ ? ಸಾಲದು. ಏನೇನೂ ಸಾಲದು. ಬಾಳೆ ತೋಟ ತೆಂಗಿನತೋಟ ಸೂರಾರೆಕರೆ ಕೊಟ್ಟುಬಿಡಬೇಕು, ದತ್ತಿ.

ವೆಂಕಣ್ಣ—ಅಂತು ಇಂತು ಹತ್ತುವರ್ಷ ಈ ಕಿರಾತನ ಕೈಕೆಳಗೆ ಸರಳಿ ಸ್ಸಾದಾಯಿತು. . . .

ರಾಮಸ್ವಾಮಿ—ಹತ್ತುವರ್ಷ ಎಲ್ಲಾಯಿತು ? ಏಳೂವರೆ ವರ್ಷ ! ಸರಿಯಾಗಿ ಒಂದು ಶನಿಕಾಟದ ಕಾಲಪ್ರಮಾಣ.

ಶಾಮರಾಯ—ಇವನ ಕಿರುಕುಳದ ಅವಾಂತರದಲ್ಲಿ ಕೂಡುವುದು, ಕಳೆಯುವುದು, ಗುಣಾಕಾರ ಎಲ್ಲಾ ಮರೆತುಹೋಗುತ್ತೆ ಶಾಮೂ ! . . . ಅಬ್ಬಬ್ಬ ! ಜೇರೆ ಯಾವ ಭೂಪತಿ ಬಂದರೂ ಇಷ್ಟು ದಬಾದುಬಿ ಮಾಡೋದಿಲ್ಲ.

ರಾಮಸ್ವಾಮಿ—ಆಫೀಸಿನಲ್ಲಿ ಇಷ್ಟು ಆರ್ಭಟ ಮಾಡುತ್ತಾನಲ್ಲಾ ಆಸಾಮಿ ! ಮನೆಗೆ ಹೋದರೆ ಮೂಗಿಗೆ ದಾರ ! ಬಾಯಿಗೆ ಕುಕ್ಕೆ ! . . .

ಶಾಮರಾಯ—ಹತ್ತುಜನ ಇರುವ ಸಭೆಯಲ್ಲಿ ನಾಲ್ಕು ಮಾತಾಡುವುದು ಅಂದರೆ ನಾಲಿಗೇನೇ ಏಳುವುದಿಲ್ಲ ನಮ್ಮ 'ಸಾಹೇಬರಿಗೆ' !

ವೆಂಕಣ್ಣ [ನಗುತ್ತಾ]—ಅವತ್ತು ಆ ಓಬೀರಾಯ ಜಯಂತಿ ಮೀಟಿಂಗಿನಲ್ಲಿ !

ರಾಮಸ್ವಾಮಿ—ಪಾಪ ! ಕನ್ನಡಕ ಕೆಳಗೆ ಬೀಳಿಸಿ. . . ಒಂದಕ್ಕೊಂದೊದರಿ. . . ನಡುಕ ಹತ್ತಿಕೊಂಡು

ಶಾಮರಾಯ—ಸಭಾಕಂಪ ! ಕಣೋ ! ಮಂಡಿಗಳಿಗೆ ಮಾತ್ರ ಮಲೇರಿಯಾ !

ವೆಂಕಣ್ಣ—ಅಂತು, ಬೇರೊಬ್ಬನಾಗಿದ್ದರೆ ಆ ಅವಮಾನಕ್ಕೆ ಸ್ವಸ್ಥವಾಗಿ ನೇಣುಹಾಕಿಕೊಂಡು ಪ್ರಾಣಬಿಟ್ಟಿರುವನು.

ರಾಮಸ್ವಾಮಿ—ನಾನೇನೋ ಈ ಭೇತಾಳವನ್ನ ಬೆನ್ನಿಂದ ಇಳಿಸುವುದಕ್ಕೆ ಅದೊಂದೇ ಉಪಾಯ ಅಂತ ಇದ್ದೆ.

ಶಾಮರಾಯ—ಸದ್ಯಃ ಕಾಟ ತಪ್ಪಿತು.

ರಾಮಸ್ವಾಮಿ—ಹುಂ. ಪೀಡೆ ಕಳೆಯಿತು.

ವೆಂಕಣ್ಣ—ಇಲ್ಲ, ರಾಮಸ್ವಾಮಿ! ಬರುತ್ತಾ ಇದೆ ಈ ಕಡೆಗೇನೆ; ನೋಡಲ್ಲಿ!

[ಮೂವರೂ ಮುಖದ ಮುದ್ರೆಗಳನ್ನು ಮಾರ್ಪಡಿಸಿಕೊಂಡು
ಗುಂಪಾಗಿ ನಿಲ್ಲುವರು. ನರಶಿಂಗರಾಯರ ಪ್ರವೇಶ.]

ನರಶಿಂಗರಾಯರು [ಮುಗುಳು ನಗೆಯನ್ನರಳಿಸುತ್ತಾ]—ಏನ್ರಿ! ಎಲ್ಲಾ ಇಲ್ಲೇ ನಿಂತಿದ್ದೀರಿ! ಮನೆಗೆ ಹೊರಡಲಿಲ್ಲವೇ?

ಶಾಮರಾಯ [' ಅತಿವಿನಯ 'ದಿಂದ]—ತಮಗೆ ವರ್ಗ ಅಂತ ಕೇಳಿದಾಗಿನಿಂದ ಮನಸ್ಸು ಒಂದು ರೀತಿಯಾಗಿ ತಳಮಳಿಸುತ್ತಾ ಇದೆ, ಸಾರ್!

ರಾಮಸ್ವಾಮಿ [ಅದೇ ರಾಗದಲ್ಲೇ]—ಅದನ್ನ 'ತಮ್ಮ ಹತ್ತಿರ' ಹೇಳುವುದಕ್ಕಾಗುವುದಿಲ್ಲ, ಸಾರ್! ಏನೋ. . . ಒಂದು ತರಹ. . .

ನರಶಿಂಗರಾಯರು [ಪೂರ್ಣಮಾಡುತ್ತಾ]—ವಿರಹತಾಪ ತಾನೇ?

ಮೂವರೂ [ಮೌನ]

ನರಶಿಂಗರಾಯರು—ನನಗೆ ಗೊತ್ತು. ಹಾಗಾಗುವುದು ಸಹಜವೇ! ಏನು ಮಾಡುವುದು? ಕಷ್ಟಗಳನ್ನು ಕೊಡುವವನೂ ಪರಮಾತ್ಮ; ಕಷ್ಟಗಳಿಂದ ಪಾರುಮಾಡುವವನೂ ಪರಮಾತ್ಮನೇ! ಅಲ್ಲವೆ? . . . ನನಗೂನೂ ಈ ಊರು ತುಂಬಾ ಒಗ್ಗಿಬಿಟ್ಟಿತ್ತು; ನಿಮ್ಮನ್ನೆಲ್ಲ ಬಿಡುವುದಕ್ಕೆ ಮನಸ್ಸು ಬರುವುದಿಲ್ಲ.

ವೆಂಕಣ್ಣ—ಹಾಗನ್ನಬಾರದು ಸಾರ್! ತಾವು ಹಾಗಂದರೆ ನಮಗೆ ತುಂಬಾ ವ್ಯಸನವಾಗುತ್ತೆ. . . ನಾವು, ನಮ್ಮ ಊರು, ಅಂತ ತಾವು ತಮ್ಮ 'ಮುಂದಿನ ದಾರಿ'ಯನ್ನಬಿಟ್ಟು ಇಲ್ಲಿ ಇರುವುದು ಧರ್ಮವೇ? ನ್ಯಾಯವೇ?

ನರಶಿಂಗರಾಯರು—ನೀವು ವ್ಯಸನಪಡಬೇಡಿರಪ್ಪ! ನನ್ನ ಬದಲಾಗಿ ಬರುವವರೂ ಕೂಡ ನನ್ನ ಹಾಗೆಯೇ. . .

ಶಾಮರಾಯ—ಅದನ್ನಮಾತ್ರ ನಾವು ನಂಬುವುದಿಲ್ಲ, ಸಾರ್! ಎಲ್ಲಾದರೂ ಉಂಟೆ? ಯಾರು ಹೇಳುವಮಾತು? ತಮ್ಮ ಹಾಗೆ ಮತ್ತೊಬ್ಬರು ಈ ಸಂಸ್ಥಾನ

ದಲ್ಲೇ ಇಲ್ಲ, ಸಾರ್ ! ತಮ್ಮೆದುರು ಹೇಳುವುದು ಸರಿಯಲ್ಲ; ಆದರೂ ಧೈರ್ಯದಿಂದ ಹೇಳುತ್ತಾ ಇದೇವೆ. . .

ರಾಮಸ್ವಾಮಿ—ಇನ್ನು ಇಂಥಾವರು ಬರುತ್ತಾರೆ ಎಂಬ ಭರವಸೆಯೇ ಇಲ್ಲ, ಸಾರ್, ನಮಗೆ. . .

ವೆಂಕಣ್ಣ—ಅಂತು ತಮ್ಮ ಯೋಗ್ಯತೆಗೆ 'ತಕ್ಕ' ಸೇವೆ ಸಲ್ಲಿಸಲಿಲ್ಲವಲ್ಲಾ ಅಂತ ಒಳಗೆ ಕುದಿಯುತ್ತಾ ಇದೆ, ಸಾರ್ ! ಅದನ್ನೇ ಒಬ್ಬರಿಗೊಬ್ಬರು ಹೇಳಿ ಕೊಳ್ಳುತ್ತಾ ಇದ್ದೆವು, ಈಗ.

ನರಶಿಂಗರಾಯರು [ಸಮಾಧಾನಪಡಿಸಲೆಳಸಿ]—ಹಾಗೆ ಚಿಂತಿಸಬೇಡ್ರಪ್ಪ ! ಸಾಧ್ಯ ವಾದರೆ ನಿಮ್ಮನ್ನೆಲ್ಲ ಅಲ್ಲಿಗೇ ಕರೆಸಿಕೊಳ್ಳುತ್ತೇನೆ. . .

ರಾಮಸ್ವಾಮಿ [ಗಾಬರಿಗೊಂಡು]—ಬೇಡಿ, ಸಾರ್ ! ಪಾಪಿಗಳ ಮೇಲೆ ಅಷ್ಟು ವಿಶ್ವಾಸ ತೋರಿಸಬೇಡಿ. . . ಆ ಮೇಲೆ ನಮ್ಮ ಮೇಲಿನ ಮಮತೆಯಿಂದ ನಿಮಗೇನಾದರೂ ಕೆಡಕಾದೀತು !

ಶಾಮರಾಯ—ತಮ್ಮ ದಯೆ ಒಂದಿದ್ದರೆ ಸಾಕು ! ಹುಟ್ಟಿಸಿದ ದೇವರು ಹುಲ್ಲು ಮೇಯಿಸುತ್ತಾನೆಯೇ ? ನಾವಿಲ್ಲೇ ಅಂಬಲಿಯೋ ಗಂಜಿಯೋ ಹಾಯಾಗಿ ಕುಡಿದು ಬದುಕುತ್ತೇವೆ. . .

ವೆಂಕಣ್ಣ—ಅಂತು ಇಂತು ತಮಗೆ ಒಂದು ಒಳ್ಳೆಯ ಹುದ್ದೆ ಸಿಕ್ಕಿ ಇಲ್ಲಿಂದ ಹೊರಡುವ ಹಾಗಾಯಿತಲ್ಲಾ ಅನ್ನುವುದೇ ನಮಗೆ ಪರಮಸಂತೋಷ. . . .

ನರಶಿಂಗರಾಯರು [ಮುಂದಕ್ಕೆ ಹೆಜ್ಜೆಯಿಡುತ್ತಾ]—ಹಾಗಾದರೆ ನಾನು ಬರುತ್ತೇನೆ ವೆಂಕಣ್ಣ ! ಬರುತ್ತೇನೆ ಶಾಮರಾವು ! ರಾಮಸ್ವಾಮಿ ! [ಮೂವರೂ ಕೈಮುಗಿಯು ವರು] ಮರೆಯಬೇಡಿ ನನ್ನನ್ನ. . . [ಹೊರಡುವರು].

ಶಾಮರಾಯ—ಸಾಧ್ಯವೇ ಸಾರ್, ತಾವು ಹೇಳುವ ಮಾತು ? ಹಾ ?

ರಾಮಸ್ವಾಮಿ [ಸಾಹೇಬರು ಮರೆಯಾದ ಮೇಲೆ]—ವೆಂಕಣ್ಣ ! ಅವನಿದ್ದಾಗ ಎಷ್ಟೊಂದು ಬೈದರೂ, ಹೊರಡುವಾಗ ಅಯ್ಯೋ ಅನ್ನಿಸುತ್ತದೆ. . "ಮರ ಣಾಂತಾನಿ ವೈರಾಣಿ" ಅಲ್ಲವೇನೋ ?

ವೆಂಕಣ್ಣ—ಪಾಪ, ಪಾಪ ! ಎಲ್ಲಾದರೂ ಹೋಗಿ ಸುಖವಾಗಿ ಬದುಕಲಿ, ನನ್ನದೇನೂ ಅಭ್ಯಂತರವಿಲ್ಲ. . . . ಆದರೆ ಹೋದಕಡೆ ಅವನನ್ನ ಮೀಟಿಂಗಿಗೆ ಗೀಟಿಂಗಿಗೆ ಯಾರೂ ಕರೆಯದೆ ಇರಲಿ, ಅಷ್ಟೇ. . . . [ಹೊರಡುತ್ತಾ] ಆ ಮೇಲೆ ಅವತ್ತಾದ ಹಾಗೆ, ಅನಾಹುತವಾಗಿ. . . .

ರಾಮಸ್ವಾಮಿ [ನಗುತ್ತಾ]—ಅವಮಾನವಾಗಿ, ಪ್ರಕ್ಷಾಳನೆ ಆಗಿ

ವೆಂಕಣ್ಣ—ಸಗಬೇಡ, ರಾಮಸ್ವಾಮಿ! ನನಗೆ ಯಾಕೋ ಅವನ ಮೇಲೆ ಕೊಂಚ ಕನಿಕರವೇ ಉಕ್ಕುತ್ತಾ ಇದೆ. . . . . . . [ಮೂವರೂ ಹೊರಡುವರು.]

[ತೆರೆ]

---

## ದೃಶ್ಯ ೨

ಸಂಜೆ ೫-೪೫; ನರಶಿಂಗರಾಯರ ಬಂಗಲಿಯ 'ಡ್ರಾಯಿಂಗ್ ರೂಂ'

[ಅವರ ಧರ್ಮಪತ್ನಿ ನರಸಮ್ಮನವರು ಇಂಗ್ಲೀಷ್ ಒಂದನೆಯ ರೀಡರನ್ನು ಓದುತ್ತಾ ಕುಳಿತಿರುವರು ; ಯಾರೋ ಬಾಗಿಲು ತೆರೆದ ಹಾಗೆ ಸದ್ದಾದಾಗ ಥಟಕ್ಕನೆ ಬಲಕ್ಕೆ ತಿರುಗುವರು ; ಎದ್ದು ಎರಡು ಹೆಜ್ಜೆ ಇಡುವುದರೊಳಗೆ ರಾಯರು ಪ್ರವೇಶಿಸುವರು ; ಕಿವಿಯಿಂದ ಕಿವಿವರೆಗೆ ಬಾಯ್ದೆರೆದಿದೆ ; ಉಬ್ಬಿ ಹಿಗ್ಗಿ ಚತುರ್ಭುಜಗಳು ಬೆಳೆದು ಆನಂದಪರವಶರಾಗಿದ್ದಾರೆ.]

ನರಶಿಂಗರಾಯರು—ಸರಸೂ! ಆರ್ಡರ್ ಬಂತು!

ನರಸಮ್ಮ—ಹಾ!

ನರಶಿಂಗರಾಯರು—ಹೂಂ! . . . ಆಫೀಸಿನಲ್ಲೇ ಬಂದಿತ್ತು! ಮನೆ ಅಡ್ರೆಸ್ಸಿಗೇ ಬರುತ್ತೆ ಅಂತ ನೀನು ಹೇಳುತ್ತಿದ್ದೆಯಲ್ಲಾ. . . . ಈಗ ಯಾರ ಮಾತು ನಿಜವಾಯಿತು?

ನರಸಮ್ಮ [ಖಿನ್ನವದನೆಯಾಗಿ]—ಇಲ್ಲೇ ಬಂದಿದ್ದರೆ 'ನನಗೆ' ಮೊದಲು ತಿಳಿಯುತ್ತಿತ್ತು; ನಾನು ನಿಮಗೆ ಹೇಳುತ್ತಿದ್ದೆ ಮುಂಚೆ!

ನರಶಿಂಗರಾಯರು—ಅಷ್ಟು ಇಂಗ್ಲೀಷು ಕಲಿತುಬಿಟ್ಟೆಯೇನು ಆಗಲೇ? ಆರ್ಡರ್ ಅರ್ಥಮಾಡಿಕೊಳ್ಳುವಷ್ಟು? [ಆಕೆಯನ್ನು ಕೂರಿಸಿ, ತಾವೂ ಕೂರುವರು.]

ನರಸಮ್ಮ—ಥೂ! ಆಫೀಸಿನಲ್ಲೇ ಲಕ್ಷ್ಮಿ ಬಂದು ನಿಮ್ಮ ಕೈ ಹಿಡಿಯಬಾರದಾಗಿತ್ತು! ಇಲ್ಲೇ ಬಂದಿದ್ದರೆ ಚೆನ್ನಾಗಿರುತ್ತಿತ್ತು; ನಾನು ಆ ಪೋಸ್ಟ್ ಪೀವನ್ನನ್ನ ಕರೆಸಿ ಕೇಳಿದೆ. . . .

ನರಶಿಂಗರಾಯರು—ಇಂಥಾ ಕಾಗದ ಎಲ್ಲಾ ಪೋಸ್ಟ್‌ಮ್ಯಾನ್ ತರುವುದಿಲ್ಲ. . .

ನರಸಮ್ಮ—ಮತ್ತೆ, ಪೋಸ್ಟ್‌ಮಾಸ್ಟರೇ ತರುತ್ತಾರೇನು?

ನರಶಿಂಗರಾಯರು—ಡಿ. ಸಿ. ದಫೇದಾರ ತಂದ. . . .

ನರಸಮ್ಮ—ಡಿ. ಸಿ.?

ನರಶಿಂಗರಾಯರು—ಹುಂ. ಡಿ. ಸಿ.! ನಮ್ಮ ಡಿ. ಸಿ.! ನಾನು ಹೇಳುತ್ತಿರಲಿಲ್ಲವೆ ನಿನಗೆ? ನನ್ನ ಹಿತಚಿಂತಕರೊಬ್ಬರಿದಾರೆ; ಆಗಾಗ ನನಗೆ ಎಚ್ಚರಿಕೆ ಕೊಡು

ತ್ತಿದ್ದರು, ಜೀರ್ಣಶಕ್ತಿ ನಿಮಗೆ ತಿನ್ನಬೇಡ, ಹುಷಾರಾಗಿರು ಅಂತ ಬುದ್ಧಿವಾದ ಹೇಳುತ್ತಿರಲಿಲ್ಲವೆ? . . . ಅವರೇ!

ನರಸಮ್ಮ [ಎದ್ದು]—ಕಾವೇರಮ್ಮನ ಗಂಡನೇ?

ನರಶಿಂಗರಾಯರು—ಹೂಂ, ಅವರೇ! [ಎದ್ದು] ನಾನೀಗ ಯಾರು ಗೊತ್ತೆ?

ನರಸಮ್ಮ—ಸರಸಮ್ಮನ ಗಂಡ!

ನರಶಿಂಗರಾಯರು—ಅದಲ್ಲ ನಾನು ಕೇಳಿದ್ದು . . . ಈ ಆರ್ಡರ್ ಬಂದಮೇಲೆ, ಯಾರು, ಅಂತ?

ನರಸಮ್ಮ—ಆರ್ಡರ್ ಬಂದಮೇಲೂ ನೀವು ನರಸಮ್ಮನ ಗಂಡ ಅಲ್ಲವೇ? [ಕೋಪಿಸಿಕೊಂಡು ಕೂತುಕೊಳ್ಳುವರು].

ನರಶಿಂಗರಾಯರು—ಅಯ್ಯೋ! ಪೆಚ್ಚಿ! . . . ಇನ್ನುಮೇಲೆ ನಾನು ಅಮಲ್ದಾರ್ ನರಶಿಂಗರಾಯರಲ್ಲ! ಎ.ಸಿ. ಸಾಹೇಬರು, ಗೊತ್ತಾಯಿತೆ? ಎ.ಸಿ. ಅಂದರೆ ಅಸಿಸ್ಟಂಟ್ ಕಮಿಷನರ್! . . . ಆಮೇಲೆ ಇನ್ನೊಂದು ವಿಷಯ, ನಾನು ಆಗಲೇ ತೀರ್ಮಾನಮಾಡಿಬಿಟ್ಟಿದೇನೆ. . . . ನಿನಗೂ ಹೇಳಿಬಿಡುತ್ತೇನೆ, ನೀನೊಪ್ಪಲೇಬೇಕು. . . . ನಿನ್ನನ್ನ ಇನ್ನು ನಾನು ನರಸು ಅನ್ನುವುದಿಲ್ಲ!

ನರಸಮ್ಮ [ಚಕಿತರಾಗಿ]—ಮತ್ತೆ!

ನರಶಿಂಗರಾಯರು—ನರಸು ಅಂದರೆ ಹಾಳು ಆಸ್ಪತ್ರೆ ಜ್ಞಾಪಕಕ್ಕೆ ಬರುತ್ತದೆ. ನರಸೂಗಿಂತ ಸರಸೂನೇ ಕಿವಿಗಿಂಪು.

ನರಸಮ್ಮ [ಒಲವಿನಿಂದ]—'ಸರಸೂ' ಅಂತ ಬೇಡಿ. . . . ಸರಸೀ ಅನ್ನಿ. . .

ನರಶಿಂಗರಾಯರು—ನೀನು ಹೇಗೆ ಹೇಳುತ್ತೀಯೋ ಹಾಗೆ! ಸರಸೀ! [ಹಾಡುತ್ತಾ] ಸರಸೀ ರುಹಾ! . . . ಸರ್ ಸೀ! . . . Sir C! . . . ಹುಂ. ಸರಸೀನೇ ಚೆನ್ನ. [ಹತ್ತಿರ ಸರಿಯುತ್ತ.]

ನರಸಮ್ಮ [ಎದ್ದು]—ಸುಮ್ಮನಿರಿ, ಅಂದ್ರೆ! ಹುಡುಗಾಟ ಮಾಡಬೇಡಿ. ಯಾವ ಊರಿಗೆ ವರ್ಗ ಅಂತ ಹೇಳಲೇಬೇಡವೇ ನಿಮ್ಮ ಸರ್‌ಸೀಗೆ?

ನರಶಿಂಗರಾಯರು—ಎಲ್ಲಿಗಾದರೇನು? ಸದ್ಯಃ ಅಮಲ್ದಾರಿ ತಪ್ಪಿ ಅಸಿಸ್ಟಂಟ್ ಕಮಿಷನರ್ ಬಂತಲ್ಲಾ . . . ಊರೂ ಕೂಡ ಒಳ್ಳೆಯದೇ! ನದಿಯಿದೆ; ನಿನಗೆ ಬೇಕಾದ ಹಾಗೆ ದೇವಸ್ಥಾನವಿದೆ. . . .

ನರಸಮ್ಮ—ತುಂಕೂರೇ?

ನರಶಿಂಗರಾಯರು—ನಿನಗೆ ಮೈಸೂರು ದೇಶದ ಭೂವಿವರಣೆಯನ್ನು ಹೇಳಿಕೊಟ್ಟ ಮೇಷ್ಟರನ್ನು ಹುಡುಕಿಸಿ ಅವರಿಗೊಂದು ಮೆಡಲು ಕೊಡಬೇಕು ಈಗಲೇ.

ನರಸಮ್ಮ—ಈಗ ಗೊತ್ತಾಯಿತು ಅಂದ್ರೆ! ನಿಮ್ಮ ಹೆಸರಿನ ಊರುತಾನೆ?

ನರಶಿಂಗರಾಯರು—ಹೌದು! ನಿನ್ನ ಹಳೇ ಹೆಸರಿನದು! . . . ನಾಲ್ಕೈದು ದಿನಗಳೊಳಗೆ ಹೊರಡಬೇಕು ನಾವು. ಅಷ್ಟರಲ್ಲಿ ಸಾಮಾನುಗೀಮಾನು ಕಟ್ಟಿ

ನರಸಮ್ಮ—ಆಫೀಸಿಂದ ನಾಲ್ಕುಜನ ಜವಾನರನ್ನು ಬರಹೇಳಿ ಅಂದ್ರೆ!

ನರಶಿಂಗರಾಯರು—ಹೇಳಿದೆ. ಆದರೆ, ನೋಡು ಸರ್‌ಸೀ! ಒಬ್ಬನ ಭಾವಮೈದ ಸತ್ತುಹೋಗಿದ್ದಾನಂತೆ; ಇನ್ನೊಬ್ಬನಿಗೆ ಛಳಿಜ್ವರ; ಆ ಬೋರನಂತೂ ಕೈಗೇ ಸಿಗುವುದಿಲ್ಲ; ಲಿಂಗನ ಹೆಂಡತಿಗೆ ಪಿಶಾಚಿ ಹಿಡಿದಿದೆಯಂತೆ, ಅವರೊಬ್ಬರೂ ಬರುವ ಹಾಗಿಲ್ಲ. . . .

ನರಸಮ್ಮ—ಇನ್ನೇನು ಮಾಡುವುದು ಹಾಗಾದರೆ! ನೂರಾರು ರೂಪಾಯಿ ಸಂಬಳ ತರುವ ಸಾಹೇಬರಾದರೂ ಕೂಡ ಕೂಲಿ ಕೊಟ್ಟೇ ಮಾಡಿಸಿಕೊಳ್ಳಬೇಕೆ ನಾವು ನಮ್ಮ ಕೆಲಸಗಳನ್ನ? ಚೆನ್ನಾಯಿತು!

ನರಶಿಂಗರಾಯರು—ಈ ತಾಪತ್ರಯಗಳನ್ನೆಲ್ಲಾ ತುಂಬಿಕೊಳ್ಳಬೇಡ ನೀನು ನಿನ್ನ ತಲೆಗೆ ಈಗ! ಆಫೀಸ್ ಗುಮಾಸ್ತೆಯರಿದಾರೆ, ಮೂರು ಜನ; ಪಾಪ! ದಾರಿಯಲ್ಲೇ ನಿಂತು ಕೊರಗುತ್ತಿದ್ದರು ನಾನು ಹೊರಟುಬಿಡುತ್ತೇನಲ್ಲಾ ಅಂತ; ಅವರನ್ನ ಕರೆಸಿ ಮಾಡಿಸುತ್ತೇನೆ. . . . ಅದನ್ನೆಲ್ಲಾ ನನಗೆ ಬಿಟ್ಟುಬಿಡು. . ಇನ್ನು ಮೇಲೆ ಕೇವಲ ಈ ಗೃಹಕೃತ್ಯದ ಹವ್ಯಾಸಗಳನ್ನ ನೀನು ತಲೆಗೆ ಹಚ್ಚಿಕೊಂಡು ಒದ್ದಾಡಬಾರದು ನೀನು.

ನರಸಮ್ಮ—ಮತ್ತೇನು ಮಾಡಬೇಕು. ನಿಗಿನಿಗಿನಿಗಿ ಅಂತ ನಿಮ್ಮ ಮುಂದೆ ಕುಣಿಯಬೇಕೇನು?

ನರಶಿಂಗರಾಯರು—ಹೂಂ ಕುಣಿಯಬೇಕು. ಯಾಕಾಗಬಾರದು? ನೀನು ನನ್ನ ಭಾಗ್ಯಲಕ್ಷ್ಮಿಯಲ್ಲವೆ? [ಹಾಡುತ್ತಾ ಕುಣಿಯುತ್ತಾ] "ಹೆಜ್ಜೆಯ ಮೇಲೆ ಹೆಜ್ಜೆಯನಿಟ್ಟು. . ."

[ಒಳಗೆ "ಸ್ವಾಮಿ!" ಎಂಬ ಕೂಗು]

[ಕುಣಿತ ನಿಲ್ಲಿಸಿ] ಹಾಳು, ಯಾವನೋ ಗಾಂಧಾರಿ! ಸಮಯ ಸಂದರ್ಭ ನೋಡದೆ, ಕೈಕೈ ಕುಲುಕಿ ಹೋಗಿಬಿಟ್ಟು ಬರುತ್ತೀಯಾ ಅಂತ ಗೋಳಾಡಿಸು ವುದಕ್ಕೆ . . [ನರಸಮ್ಮನವರು ಒಳಕ್ಕೆ ಹೋಗುವರು] ಯಾರಯ್ಯಾ ಅದು? [ಡಿ.ಸಿ. ದಫೇದಾರನ ಪ್ರವೇಶ].

ಡಿ.ಸಿ. ದ.—ದೊಡ್ಡ ಸಾಹೇಬರು ಒಂದು ಕಾದಗ ಕೊಟ್ಟಿದಾರೆ. . .

ನರಶಿಂಗರಾಯರು [ಅದನ್ನು ಸ್ವೀಕರಿಸಿ ಪುಸ್ತಕದಲ್ಲಿ ರುಜು ಮಾಡಿದನಂತರ, ಆತ

ಅಲ್ಲೇ ಹಲ್ಲು ಕಿರಿಯುತ್ತಿದ್ದುದನ್ನು ನೋಡಿ] ಸರಿ! ಏನು? ಇನ್ನೇನೂ ವಿಶೇಷವಿಲ್ಲ ತಾನೆ?

ಡಿ.ಸಿ. ದ.—ತಮಗೆ ಗೊತ್ತಿಲ್ಲವೆ, ಸ್ವಾಮಿ! ಅಮ್ಮಾವರನ್ನ ಕೇಳಿ ನನಗೇನಾದರೂ ಒಂದು ಒಳ್ಳೇ ಇನಾಮು ಕೊಡಿ, ಸ್ವಾಮಿ! ತಮ್ಮ ಹೆಸರು ಹೇಳಿಕೊಂಡು ನಾನೂನೂ. . .

ನರಸಿಂಗರಾಯರು—ಆಗಲಿ! ಅದಕ್ಕೇನು? ಸಾಯಂಕಾಲ ಬಾ! ನಿನಗೆ ಸೊಗಸಾದ ಒಂದು ಸರ್ಟಿಫೀಕೇಟ್ ಬರೆದುಕೊಡುತ್ತೇನೆ. . . ಏನು?

ಡಿ.ಸಿ. ದ. [ಹೊರಡುತ್ತಾ]—ಆಗಬಹುದು, ಸ್ವಾಮಿ! . . . [ಆತ್ಮಗತಂ] ನಾವೂನೂ ನಿಮಗೊಂದು ಸರ್ಟಿಫಿಕೆಟ್ ಮಡಗಿದ್ದೇವೆ! . . [ಹೊರಡುವನು] [ಒಳಗಿನಿಂದ ನರಸಮ್ಮನವರ ಪ್ರವೇಶ].

ನರಸಿಂಗರಾಯರು—ಸರಸೂ! ಡಿ.ಸಿ. ಯವರಿಂದ ಇನ್ನೊಂದು ಸ್ವಹಸ್ತ!

ನರಸಮ್ಮ—ಏನು ಬರೆದಿದಾರೆ ನೋಡಿ ಬೇಗ. . . ನನಗೆ ಯಾಕೋ ಭಯವಾಗುತ್ತಾ ಇದೆ. . . ಬಲಗಣ್ಣು ಮಿಡಿಯುತ್ತಾ ಇದೆ. . .

ನರಸಿಂಗರಾಯರು—ಬಲಗಣ್ಣು ಮಿಡಿದರೆ ತಕ್ಷಣ ಕನ್ನಡಿ ನೋಡಿಕೊಳ್ಳಬೇಕು. . . ಆಗ ಬಲಗಣ್ಣು ಎಡಗಣ್ಣಾಗುತ್ತೆ! [ಒಡೆದು ಓದುತ್ತಾ]. . . ಅಯ್ಯೋ!

ನರಸಮ್ಮ—ಏನಾಯಿತು? ಹೋಯಿತೇ ಕೆಲಸ?

ನರಸಿಂಗರಾಯರು—ಇಲ್ಲ, ಇಲ್ಲ! ಬಂದ ಭಾಗ್ಯಕ್ಕೇನೂ ಮೋಸವಿಲ್ಲ. . . ಆದರೂ ಯಾರದೋ ಮಹಾ ಪಿತೂರಿ ಇದು. . .

ನರಸಮ್ಮ—ಪಿತೂರಿ ಎಂಥಾದ್ದು! ಡಿ.ಸಿ. ಯಂಥ ದೊಡ್ಡ ದೊಡ್ಡ ಆಫೀಸರುಗಳು ಸೇರಿ ಪಿತೂರಿ ಹೂಡುತ್ತಾರೇನು?

ನರಸಿಂಗರಾಯರು—ಈ ಊರಲ್ಲಿ ಆ ಹಾಳು ಧರ್ಮೋದ್ಧಾರ ವಿದ್ಯಾಲಯವಿಲ್ಲವೆ? ಅದರ ವಾರ್ಷಿಕೋತ್ಸವವಂತೆ ಸಾಯಂಕಾಲ!

ನರಸಮ್ಮ [ಗಾಬರಿಗೊಂಡು]—ನಿಮ್ಮನ್ನ ಕರೆದುಬಿಟ್ಟಿದಾರೆಯೇ?

ನರಸಿಂಗರಾಯರು [ವ್ಯಸನದಿಂದ]—ಹೂಂ! ಸರಸೂ. . .

ನರಸಮ್ಮ—ಅಯ್ಯೋ! ಗ್ರಹಚಾರವೇ! ಹೋದ ಸಾರಿ ಆ ಮೀಟಿಂಗಿನಲ್ಲಿ ಆದ ಹಾಗೆ ಅವಮಾನವಾಗಬೇಕು ಅಂತ. . .

ನರಸಿಂಗರಾಯರು—ಈಗ ಡಿ. ಸಿ. ಯವರೇ ಆ ಸ್ಕೂಲ್ ಕಮಿಟಿಯ ಅಧ್ಯಕ್ಷರು! ಅವರೇ ಸ್ವಹಸ್ತದಿಂದ ಆಹ್ವಾನಿಸಿದಾರೆ.

ನರಸಮ್ಮ—ಹಾಗಾದರೆ ನೀವು ಒಪ್ಪಲೇಬೇಕು! ಈ ಸಮಯದಲ್ಲಿ ಅವರ ಮಾತನ್ನ ಮೀರುವುದುಂಟೆ?

ನರಶಿಂಗರಾಯರು—ಸರಿ, ಜಡೆ! ಅವರ ಮಾತಿಗೆ ಗೌರವ ಕೊಡುವುದಕ್ಕೆ ಹೋಗಿ ಹಳ್ಳಕ್ಕೆ ಬಿದ್ದು ಆಳಿಗೊಂದು ಕಲ್ಲು ಅಂತ ಬೀರಿಸಿಕೊಳ್ಳಲೇ? [ಗಾಬರಿಯಿಂದ] ಅಯ್ಯೋ! ಅಯ್ಯೋ! ಥಳಿ ಜ್ವರ ಅಂತ ಕಾಗದ ಬರೆದುಬಿಡುತ್ತೇನೆ, ಅಷ್ಟೆ. ಕಂಬಳಿ ಹೊದ್ದುಕೊಂಡು ತೆಪ್ಪಗೆ ಮಲಗಿಬಿಡುತ್ತೇನೆ. . . .

ನರಸಮ್ಮ—ಚೆನ್ನಾಗಿದೆ! ಚೆನ್ನಾಗಿದೆ! ರೈತಾಪಿ ಜನರಿಗೆ ಬುದ್ಧಿವಾದ ಹೇಳುವ ಸಭೆಗಿಭೆ ಸೇರಿಸುವುದಕ್ಕೆ ಲಾಯಕ್ಕಿಲ್ಲ ಅಂತ ಈ ಡಿ. ಸಿ. ಯವರಿಗೂ ತಿಳಿದುಬಿಟ್ಟರೆ ಕೆಲಸಕ್ಕೇ ಸಂಗನಾಮ! ಜೋಕೆ! . . . ಯಾಕೆ ಹೀಗೆ ಹೆದರಿ ಸಾಯುತ್ತೀರಿ? ಆಫೀಸಿನಲ್ಲಿ ಮಾತ್ರ ಜೋರುಮಾಡುತ್ತೀರಂತೆ, ಮೀಟಿಂಗು ಅಂದರೆ ಮೂಲೆಯಲ್ಲಿ ಮುದುರಿಕೊಳ್ಳುತ್ತೀರಲ್ಲಾ! . . .

ನರಶಿಂಗರಾಯರು—ಹೇಳಿದನಲ್ಲೇ ಅವತ್ತೇನೆ? ಕಾಲೇಜಿನಲ್ಲೊಂದು ಸಾರಿ 'ಡಿಬೇಟಿ'ನಲ್ಲಿ ಮಾತನಾಡುವಾಗ ನಡುಮಧ್ಯೆ ಹುಡುಗರೆಲ್ಲರೂ "ಸಾಕಪ್ಪ, ಸ್ಪೀಜು! ಹಾಕಪ್ಪ, ಬ್ರೇಕು" ಅಂತ ಒಟ್ಟಾಗಿ ಕಾಲುಬಡಿದು ಕೂಗಿದರು. . . . ಅವತ್ತಿನಿಂದ, ಸರಸೂ. . . .

ನರಸಮ್ಮ—ಇವತ್ತಿನವರೆಗೆ! ಅಷ್ಟೆ! . . . ಇಲ್ಲಿ ಕೇಳಿ, ಇಲ್ಲಿ! ಈ ಮೀಟಿಂಗಿಗೆ ಹೋಗಲೇಬೇಕು ನೀವು. . . .

ನರಶಿಂಗರಾಯರು—ನನಗೂ ಹಾಗನ್ನಿಸುತ್ತಾ ಇದೆ. ಡಿ. ಸಿ. ಯವರೇ ಅಪ್ಪಣೆ ಮಾಡಿದ್ದಾರೆ. ಎರಡನೆಯದು, ನನ್ನ ಹಳೇ ಸ್ಕೂಲು ಅದು. ನನ್ನ ಜೊತೆಯಲ್ಲಿ ಓದುತ್ತಿದ್ದ ಕೇಶವಯ್ಯನೇ ಅದರ ಹೆಡ್ಮೇಷ್ಟರು! ಅಲ್ಲದೆ, ಒಬ್ಬನ ಚಿತ್ರ ಬೇರೆ ಅನಾವರಣ ಮಾಡಬೇಕಂತೆ ನಾನು! ಅವನೂ ನಮ್ಮ ಕೂಡ ಓದಿದವನೇ! ರಾವು ಬಹದ್ದೂರ್ ದೊಡ್ಡ ಮುದ್ದಣ್ಣ ಅಂತಾರೆ ಅವನನ್ನ. . . . ನಾವು ಅವನನ್ನ ಗೊಡ್ಡಣ್ಣ ಅನ್ನುತ್ತಿದ್ದೆವು!

ನರಸಮ್ಮ [ಸಲಿಗೆಯಿಂದ]—ನಿಮಗೂನೂ ಅಡ್ಡ ಹೆಸರು ಗಿಡ್ಡ ಹೆಸರು ಯಾವುದೂ ಇರಲಿಲ್ಲವೇ ಸ್ಕೂಲಲ್ಲಿ? ನನಗೆ ಹೇಳೇ ಇಲ್ಲವಲ್ಲಾ ನೀವು?

ನರಶಿಂಗರಾಯರು [ನಾಚಿಕೆಯಿಂದ]—ಇತ್ತು! ಆದರೆ ಅದನ್ನೆಲ್ಲಾ ದೊಡ್ಡವರಾದ ಮೇಲೆ ಹೇಳಿಕೊಳ್ಳುತ್ತಾರೆಯೇನೇ, ಸರಸೀ?

ನರಸಮ್ಮ—ಯಾಕೆ? ಯಾಕೆ ಹೇಳಬಾರದು? . . . [ದೂರ ಸರಿಯುತ್ತಾ] ಇಷ್ಟೇನೇ ನಿಮ್ಮ ಸ್ನೇಹ!

ನರಶಿಂಗರಾಯರು—ನೋಡಿದೆಯಾ! ಹಾಗೆಲ್ಲ ಅನ್ನಬಾರದು! ಬಾ, ಇಲ್ಲಿ! [ಹತ್ತಿರ ಸರಿದು] ಆರನೆಯ ವರ್ಷದಲ್ಲಿ ನನಗೆ ಜ್ವರಬಂದು ತಲೆಕೂದಲೆಲ್ಲಾ ಉದುರಿ ಹೋಗಿತ್ತು. . . . ಅದಕ್ಕೆ ನನ್ನನ್ನ. . . . ಬೋಳಾ ಅಂತ. . . . ಕೊಂಚ ಕಾಲ. . . . ಕೆಲವರು ಪೋಕರಿಗಳು. . . .

ನರಸಮ್ಮ [ನಗುತ್ತಾ]—ಪೋಕರಿಗಳು ಅಂತ ಯಾಕೆ ಬೈಯಬೇಕು ಅವರನ್ನ! ಪಾಪ. . . . ಇರಲಿ! ಈಗ ಈ ಕಾಗದಕ್ಕೆ ಏನುಮಾಡುತ್ತೀರಿ?

ನರಶಿಂಗರಾಯರು—ಒಲ್ಲೆ ಅಂತ ಬರೆದುಬಿಟ್ಟು ಹಾಸಿಗೆ ಹಿಡಿಯುತ್ತೇನೆ, ವಿಧಿಯಿಲ್ಲ!

ನರಸಮ್ಮ—ಭೀತನ ಹಿಂದೆ ಭೂತ ಅಂತಾರೆ! ಹೀಗೆ ಭೀತಿಪಟ್ಟರೆ ಹೇಗೆ? ನನ್ನ ಚಿಕ್ಕಮ್ಮನ ಮಗ, ಗುಂಡು ಪಂಡಿತ, ಗೊತ್ತಿಲ್ಲವೆ? ಅವನು ಆಗಲೇ ಹೇಳಿದ್ದ, ಆ ಸಾರೀನೇ! ನಿಮಗೆ ಅವಮಾನ ಆದಾಗಲೇನೇ! ಒಂದು ಚಿಟಿಕಿ ಚೂರ್ಣದಿಂದ ನಿನ್ನ ಗಂಡನ ಗುಂಡಿಗೇನ ರಿಪೇರಿ ಮಾಡಿಬಿಡುತ್ತೇನೆ ಅಂದ. ಸುಬ್ಬಕ್ಕನ ಮಗಳ ಮದುವೆಗೆ ಅವನು ಈ ಊರಿಗೆ ಬಂದಿದ್ದರೂ ಬಂದಿರಬಹುದು, ಹೆಗ್ಗಡದೇವನ ಕೋಟೆಯಿಂದ. . . . ಔಷಧಿ ಡಬ್ಬಿಗಳೆಲ್ಲ ಅವನ ಸೊಂಟದ ಸುತ್ತ ಸದಾ ಇರುತ್ತವೆ. . . . ಹೋದ ಮಾಸವನ್ನ ಹಿಂದಕ್ಕೆ ತರಿಸುತ್ತಾನೆ ಅವನು. . . . ನನಗೆ ಧೈರ್ಯ ಇದೆ.

ನರಶಿಂಗರಾಯರು—ಅಯ್ಯೋ! ಅವನು ಸಿಕ್ಕಿ, ಅವನ ಹತ್ತಿರ ಚೂರ್ಣ ಇದ್ದು, ನನಗೆ ಧೈರ್ಯ ಬಂದು, ನಾನು ಡಿ. ಸಿ. ಗೆ ಬರೆದು. . . . ಇವೆಲ್ಲಾ ಯಾವಾಗ, ಏನು ಕಥೆ? ನರಸೀ! ನೀನು ಸುಮ್ಮನಿದ್ದುಬಿಡು, ಕಾಗದ ಗೀಚಿಹಾಕಿಬಿಟ್ಟು ಕ್ವಿನೀನ್ ಕುಡಿಯುತ್ತಾ ಮಲಗಿರುತ್ತೇನೆ. . . .

ನರಸಮ್ಮ—ಛೆ, ಛೆ! "ಗುಂಡುಪಂಡಿತನ ಚೂರ್ಣತಿಂದು ದಂಡಿಗೆ ಹೋಗೋಣ, ಬಾ ಅಣ್ಣ" ಅಂತ ಹೆಗ್ಗಡದೇವನಕೋಟೆ ಕಡೆಯೆಲ್ಲ ಗಾದೆ ಇದೆ, ಅಂದ್ರೆ! ಸುಬ್ಬಕ್ಕನ ಮನೆಗೆ ಮೊದಲು ಹೇಳಿ ಕಳುಹಿಸುತ್ತೇನೆ. ಅವನು ಬಂದಿದ್ದರೆ, ಅವನ ಹತ್ತಿರ ಚೂರ್ಣ ಇದ್ದೇ ಇರುತ್ತೆ. ಅದು ಸಿಕ್ಕರೆ,

ನರಶಿಂಗರಾಯರು—ಒಪ್ಪಿಕೊಳ್ಳುತ್ತೇನೆ; ಇಲ್ಲದೆ ಇದ್ದರೆ,

ನರಸಮ್ಮ—ಗೊತ್ತೇ ಇದೆ. ಉತ್ತರನ ಪೌರುಷ. . . .

ನರಶಿಂಗರಾಯರು—ಎಲೆ ಮುಂಡೆ, ಅಷ್ಟೆ.

[ತೆರೆ]

---

## ದೃಶ್ಯ ೩

### ಜಂಗಳೂರಿನ ಒಂದು ಬೀದಿ. ಸಂಜೆ ೬ ಗಂಟೆ

[ಇಬ್ಬರು ಹುಡುಗರು ತುಂಬ ಮಾವಿನ ಸೊಪ್ಪನ್ನು ಹೊತ್ತುಕೊಂಡು ಬರುವರು.]

ಕಿಟ್ಟು—ನಮ್ಮ ಹೆಡ್ಮೇಷ್ಟರಿಗೆ ಮರ ಹತ್ತುವುದಕ್ಕೆ ಬರುತ್ತೆ ಅಂತ ಗೊತ್ತೆ ಇರಲಿಲ್ಲ ನನಗೆ! ಎಷ್ಟೊಂದು ಸೊಪ್ಪು ಕಿತ್ತುಕೊಟ್ಟರು!

ರಾಮು—ಥಂಗಂತ ಹೇಗೆ ನೆಗೆಯುತ್ತಾರೆ, ಕೊಂಬೆಯಿಂದ ಕೊಂಬೆಗೆ. . . .

ಕಿಟ್ಟು—ಪಾಪ! ಬೆಳಗ್ಗಿಂದ ಅವರಿಗೆ ಊಟವೇ ಇಲ್ಲ, ಕಣೋ! ನಮಗೆ ಕಾಫಿ ಕೊಡಿಸಿದರಲ್ಲಾ; ಅವರೊಂದು ತೊಟ್ಟೂ ಕುಡಿಯಲಿಲ್ಲ! . . . ನಿನ್ನೆ ಅವರೇನೆ 'ಸ್ವಾಗತ,' 'ಸಿರಿಗನ್ನಡಂ,' ಅಂತ ಗೋಡೆ ಮೇಲೆಲ್ಲಾ ಬರೆದರು ಕಣೋ! . . . ಡ್ರಾಯಿಂಗ್ ಮೇಷ್ಟ್ರು ಏನೂ ಮಾಡುವುದಿಲ್ಲ ಅಂತ ತಕರಾರು ಮಾಡಿದರಂತೆ, ರಾಮೂ!

ರಾಮು—ಅವರಿಗೂ ಹೆಡ್ಮೇಷ್ಟರಿಗೂ ವಿಪರೀತ ಜಗಳವಂತೆ. . . .

ಕಿಟ್ಟು—ಮೊನ್ನೆ ಮೊನ್ನೆವರೆಗೂ ಅವರಿಬ್ಬರೂ ಸ್ನೇಹವಾಗಿಯೇ ಇದ್ದರು. ಅವರ ತಾಯಿಯ ಚಿತ್ರಾನ ಡ್ರಾಯಿಂಗ್ ಮೇಷ್ಟರೇ ಬಿಟ್ಟಿ ಬರೆದುಕೊಟ್ಟರು! ಈಗ ಈ ರಾವುಸಾಹೇಬರ ಚಿತ್ರಾನೂ ಅಷ್ಟೆ. . . .

ರಾಮು—ಗೊತ್ತು, ಕಿಟ್ಟು! ಆದರೆ, ಅದಕ್ಕೆ ಚೌಕಟ್ಟು ಹಾಕಿದ್ದು ಯಾರು ಗೊತ್ತೆ? ಹೆಡ್ಮೇಷ್ಟರು! ನಿನ್ನೆ ರಾತ್ರಿಹತ್ತುಗಂಟೆ ಮೇಲೆ ಕೂತು ಮುಗಿಸಿದರು. . .

ಕಿಟ್ಟು—ರಾಮೂ! ನಿನ್ನ ಹತ್ತಿರ ಒಂದು ವಿಷಯ ಹೇಳುತ್ತೇನೆ, ಯಾರಿಗೂ ಹೇಳಬಾರದು ನೀನು, ಗುಟ್ಟಾಗಿಟ್ಟಿರಬೇಕು. . . .

ರಾಮು—ನನಗೆ ಅಷ್ಟು ನೆಚ್ಚಿಗೆಯಿಲ್ಲ, ಕಿಟ್ಟು, ನನ್ನ ನಾಲಿಗೆ ವಿಷಯದಲ್ಲಿ. ಹಾಳಾದ್ದು ಎಲ್ಲಾದರೂ ಅಪ್ಪಿತಪ್ಪಿ ತುಟಿಹಾರಿ ಹೊರಕ್ಕೆ ಬಂದರೆ. . . .

ಕಿಟ್ಟು—ಹೋಗೊ, ಕಂಡಿದೇನೆ. ಹಾಗೇನಾದರೂ ಬಂದರೂ ಪ್ರಮಾದವೇನೂ ಇಲ್ಲ! . . . ವಿಷಯ ಏನು ಗೊತ್ತೆ? ಇವತ್ತು ಬೆಳಗ್ಗೆ ನೀಲಕಂಠ ಮೇಷ್ಟರು ನನ್ನನ್ನ ಕರೆದುಬಿಟ್ಟು ಹೇಳಿದರು, ನಮ್ಮ ಹೆಡ್ಮೇಷ್ಟರ ಅಡ್ಡ ಹೆಸರು ಏನೂ ಅಂತ ಅವರೇನೇ. . . .

ರಾಮು [ತಡೆದು]—ಇಲ್ಲಿ ಒದರಬೇಡ. . . . ಯಾರ ಕಿವಿಗಾದರೂ ಬಿದ್ದೀತು. . . . ಈ ಸೊಪ್ಪಿನ ಕಂತೇನ ಸ್ಕೂಲ್ ಬಾಗಿಲಲ್ಲಿ ಬಿಸಾಕಿಬಿಟ್ಟು ಹಾಸ್ಟಲಿಗೆ ಹೋಗೋಣ. . . . ಅಲ್ಲಿ ಹೇಳು. . . . [ಹೊರಡುವರು.]

[ತೆರೆ]

---

## ದೃಶ್ಯ ೩

ಧರ್ಮೋದ್ಧಾರ ವಿದ್ಯಾಲಯದ ಆಫೀಸ್ ರೂಂ. ಸಂಜೆ ೬-೧೦

[ಹೆಡ್ಮೇಷ್ಟರು ಕೇಶವಯ್ಯನವರೂ ಎ. ಸಿ. ನರಶಿಂಗರಾಯರೂ ಮೇಜಿನ ಹತ್ತಿರ ಕುರ್ಚಿಗಳಲ್ಲಿ ಕುಳಿತಿರುವರು ; ಮೇಜಿನ ಮೇಲೆ ಇಬ್ಬರಿಗೂ ಕಾಫಿ ಇದೆ ; ಕೋಣೆಯ ಮೂಲೆಯಲ್ಲಿ ಒಂದು ತ್ರಿಪಾದದ ಮೇಲೆ ಬಟ್ಟೆಮುಚ್ಚಿದ ರಾವು ಸಾಹೇಬರ ಭಾವಚಿತ್ರ ಇದೆ].

ಕೇಶವಯ್ಯ [ತಲೆಯ ಮೇಲೆ ಕೈಯಿಟ್ಟು]—ನಾನೇನು ಮಾಡುವುದು, ನರಶಿಂಗಾ! ಯಾರುಯಾರನ್ನೋ ಕೇಳಿದೆ.

ನರಶಿಂಗರಾಯರು—ಆ ರಿಟೈರ್ಡ್ ಎಕ್ಸೈಸ್ ಇನ್ಸ್ಪೆಕ್ಟರನ್ನ ಕೇಳಿದೆಯಾ ?

ಕೇಶವಯ್ಯ—ಏನಯ್ಯ! ಅವನನ್ನ ಕೇಳದೆ ಇರುತ್ತೇನೆಯೇ ! ಬಂದೇನಾದರೂ ಬೊಗುಳಪ್ಪ ಅಂದೆ. ಅವನಿಗೆ ನಾಯಿಕೆಮ್ಮಲಂತೆ, ಏನು ಮಾಡುತ್ತೀಯಾ? . . . ನಂಬಿದರೆ ನಂಬು ಬಿಟ್ಟರೆ ಬಿಡು, ಆ ಪಬ್ಲಿಕ್ ಪ್ರಾಸಿಕ್ಯೂಟರನ್ನೂ ಕೂಡ ಕೇಳಾಯಿತು. ಅವನೇನೋ ಊರಲ್ಲಿದಾನೆ; ಆದರೆ ದೊಡ್ಡ ಮುದ್ದಣ್ಣನ ಚಿತ್ರಾನ ಅವನು ಅನಾವರಣಮಾಡುವುದಿಲ್ಲವಂತೆ. ಬೇಕಾದರೆ ತೆರೆದಿಡು; ನಾನು ಬಂದು ಆವರಣಮಾಡುತ್ತೇನೆ ಅಂತಾನೆ. . . . ಆಮೇಲೆ ನಾನೇನು ಮಾಡುವುದು ? ಸ್ವಸ್ಥವಾಗಿ ಹೋಗಿ ಪ್ರೆಸಿಡೆಂಟರಿಗೆ ಹೇಳಿದೆ. . . .

ನರಶಿಂಗರಾಯರು—ಅದೇ, ನಮ್ಮ ಡಿ.ಸಿ. ಗೆ.

ಕೇಶವಯ್ಯ—ಹುಂ. . . . ಡಿ.ಸಿ. ಗೆ ! ಅವರು ನಿನ್ನ ಹೆಸರೆತ್ತಿಬಿಟ್ಟರು. ನಾನು 'ಬೇಡ ಬೇಡ' ಅಂದೆ. ಅಡ್ಡಬೀಳುವುದೊಂದು ಬಾಕಿ. 'ಊರುಬಿಟ್ಟು ಹೋಗುವ ಪ್ರಾಣಿ; ಅವಮಾನವಾದರೆ ನಮಗೇನಂತೆ; ಪೇಪರಲ್ಲಿ ಹಾಕಿಸದೆ ಇದ್ದರೆ ಆಯಿತು' ಅಂತ ಹೇಳಿ ಅವರೇ ನಿನಗೆ ಕಾಗದ ಬರೆದುಬಿಟ್ಟರು !

ನರಶಿಂಗರಾಯರು [ಎದೆ ಚಾಚಿ]—ಆದರೆ, ಈಗ ಅಂಥಾ ಚಿಂತೆ ಏನೂ ಇಲ್ಲ ಕೇಶವಯ್ಯ. ಈ ಸಾರಿ ಅನಾಹುತವೇನೂ ಆಗುವುದಿಲ್ಲ, ಖಂಡಿತ ! ನೀನೇನೂ ಹೆದರಬೇಡ. . . . ಈಗ ನೋಡು, ಮೀಟಿಂಗಿಗೆ ಇನ್ನೂ ಅರ್ಧಗಂಟೆ ಕೂಡ ಇಲ್ಲ, ಅಲ್ಲವೆ ? ಆದರೂ ನನ್ನ ಕೈಕಾಲು ತಣ್ಣಗಾಗಿದೆಯೋ ? [ಕೇಶವಯ್ಯ ಕೈಹಿಡಿದು ನೋಡಿ, ಇಲ್ಲ, ಎಂದು ತಲೆ ಅಲ್ಲಾಡಿಸುವನು.] ಇಲ್ಲ ! ಏಕೆ ಗೊತ್ತೆ ? . . . ಒಂದು ಚೂರ್ಣ ತಂದಿದೇನೆ. . . . ಈ ಕಾಫಿ ಕೊಂಚ ಆರಲಿ ಅಂತ ಕಾದಿದೇನೆ, ಅಷ್ಟೆ ! ಹಾಕಿಕೊಂಡು ಕುಡಿದೆ ಅಂದರೆ, ಧೈರ್ಯ ಬರುತ್ತೆ, ಲವಲವಿಕೆ ಉಂಟಾಗುತ್ತೆ. . . . ಆರು ಪೇಜಿನ ಉಪನ್ಯಾಸಾನ ನಿಂತಕಾಲಲ್ಲೇ ನಾದಸ್ವರ ಬಾರಿಸಿದ ಹಾಗೆ ನುಡಿದು ಪೂರೈಸಿಬಿಡುತ್ತೇನೆ.

ಕೇಶವಯ್ಯ—ಅದೆಂಥಾ ಚೂರ್ಣ! ನನ್ನ ಕಾಫೀಗೂ ಕೊಂಚ ಹಾಕು! ನನಗೂ ನಿನ್ನೆಯಿಂದ ಕೊಂಚ ತಲೆಸ್ಸೋವು, ಮೈಕೈಯೆಲ್ಲಾ ಸುಸ್ತು! ಈ ಸಮಾರಂಭ ಸಂಭ್ರಮ ಇದೊಂದಕ್ಕೂ ಯಾರೂ ನನ್ನ ಜೊತೆ ಸೇರುತ್ತಾ ಇಲ್ಲ, ನರಶಿಂಗರಾವ್! ಅಸಹಕಾರ ಅಂತ ಮಹಾತ್ಮರ ಹೆಸರು ಬೇರೆ ಈ ಹಾಳು ದ್ವೇಷಕ್ಕೆ! ಇನ್ನೇನೂ ಇಲ್ಲ, ನರಶಿಂಗರಾವ್! ದೊಡ್ಡಮುದ್ದಣ್ಣನ ಮಗನಿಗೆ ನಾನು ಟ್ಯೂಷನ್ ಹೇಳುತ್ತೇನೆ, ತಿಂಗಳಿಗಾರು ರೂಪಾಯಿ ಕೊಡುತ್ತಾನೆ, ಅದಕ್ಕೆ ಇವರಿಗೆಲ್ಲಾ ಹೊಟ್ಟೆಯಲ್ಲಿ ಬೆಂಕಿ! . . . ಹಾಕು ಕೊಂಚ ಚೂರ್ಣ ನನಗೂನೂ!

ನರಶಿಂಗರಾಯರು—ಡಿ.ಸಿ. ಬರುವುದಕ್ಕೆ ಮೊದಲು ಕೊಂಚ ಚೈತನ್ಯ ತಂದುಕೊಂಡು ಚೇತರಿಸಿಕೊ. . . . [ಪೊಟ್ಟಣ ತೆಗೆದು ಬಿಚ್ಚಿ ಎರಡು ಬಟ್ಟಲುಗಳಿಗೂ ಹಾಕಿ, ಮೆತ್ತಗೆ ನಿಧಾನವಾಗಿ ಕುಡಿಯುವರು.]

ಕೇಶವಯ್ಯ [ಥಟಕ್ಕನೆ ತಲೆಯೆತ್ತಿ]—ಹ . . . ಹ್ಹ . . . ಹ್ಹ.

ನರಶಿಂಗರಾಯರು [ಥಟಕ್ಕನೆ ಹೆಡ್ಮೇಷ್ಟರ ಭುಜವನ್ನು ಬಡಿದು]—ಹೊ . . . ಹ್ಹೊ . . . ಹ್ಹೊ . . .

ಕೇಶವಯ್ಯ [ಎದ್ದು]—ಲೋ! ಬೋಳ!

ನರಶಿಂಗರಾಯರು—ಕೇರೇಹಾವು ಅಂತಲ್ಲವೇನೋ ನಿನ್ನ ಹೆಸರು?

ಕೇಶವಯ್ಯ—ಏ! ಮರಕೋತಿ! ಅದನ್ನೆಲ್ಲಾ ಈಗ ಜ್ಞಾಪಿಸಿದರೆ ರೇಗುತ್ತೆ ನೋಡು!

ನರಶಿಂಗರಾಯರು—ಲೋ! ತೋಳ! ತಲೆಯೊಳಗೆ ಏನೇನೋ ಆಗುತ್ತಾ ಇದೆ.

ಕೇಶವಯ್ಯ—ಬಾರೋ! ಇಸ್ಪೀಟಾಡೋಣ.

ನರಶಿಂಗರಾಯರು—ಲೋ! ಸಿನಿಮಾಗೆ ಹೋಗೋಣ, ಸಿನಿಮಾಗೆ!

ಕೇಶವಯ್ಯ [ಒಂದು ಕುರ್ಚಿಯನ್ನೆತ್ತಿ ಹಿಡಿದು ನರಶಿಂಗರಾಯರನ್ನಟ್ಟಿಸಿಕೊಂಡು ಹೋಗಿ, ಅದನ್ನು ಕೆಳಗಿರಿಸಿ ನಗುತ್ತಾ]—ಬೇಡ! ಬೇಡ! ಕಾಳೇಗೌಡನ ತೋಟಕ್ಕೆ ಹೋಗಿ ಸೀಬೇಕಾಯಿ ಕಿತ್ತುಕೊಂಡು ಬರೋಣ.

ನರಶಿಂಗರಾಯರು—ಲೋ! ಗೋಲಿ ಆಡೋಣ, ಬಾ!

ಕೇಶವಯ್ಯ [ಗುದ್ದುತ್ತಾ]—ತಕೋ! ಹೊಸ ಅಂಗಿ ಗುದ್ದು!

ನರಶಿಂಗರಾಯರು [ಅಳುತ್ತಾ]—ಅಮ್ಮಾ! ನನ್ನ ಬತ್ತಾಸು ಕಿತ್ತುಕೊಂಡುಬಿಟ್ಟ ಈ ಹುಡುಗ!

ಕೇಶವಯ್ಯ [ಅಳುತ್ತಾ]—ಅಕ್ಕಾ! ಅಕ್ಕಾ! ನನ್ನ ಪೀಪಿ!

[ಇಬ್ಬರೂ ಒಂದುಕಡೆಯಿಂದ ಮತ್ತೊಂದಕ್ಕೆ ಹಾರುತ್ತಾ, ನಗುತ್ತಾ, ಅಳುತ್ತಾ ಇದ್ದು ಕಡೆಗೆ ಕೊಂಚ ಸುದಾರಿಸಿಕೊಂಡು ಮಥ್ಯೆ ಬಂದು ನಿಲ್ಲುವರು.]

ನರಶಿಂಗರಾಯರು [ಹೆಡ್ಮೇಷ್ಟರ ಗಲ್ಲಹಿಡಿದು ಪ್ರೀತಿಯಿಂದ]—ಅಲ್ಲ, ಕಣೋ! ಎಲ್ಲಾ ಬಿಟ್ಟು [ಚಿತ್ರ ತೋರಿಸಿ] ಈ ಹೆಗ್ಗಣದ ಮೂರ್ತಿಯನ್ನ ಅನಾವರಣಮಾಡಿ ಸುತ್ತೀಯಲ್ಲೋ, ಮಾರ್ಜಾಲಾ! [ಗುದ್ದುವರು.]

ಕೇಶವಯ್ಯ [ರುಮಾಲನ್ನು ನರಶಿಂಗರಾಯರ ತಲೆಯಮೇಲೆ ಹಿಂದು ಮುಂದಾಗಿರಿಸುತ್ತಾ]—ಹೌದೋ ಹಯವದನ! ಈ ಗೊಡ್ಡಣ್ಣ ಒಂದು ಸಾರಿ ಏನುಮಾಡಿದ ಗೊತ್ತೆ! ತಾನು ಕದ್ದ ಕಡಲೇಕಾಯೀನ ನನ್ನ ಜೋಬಿಗೆ ಹಾಕಿ ನನಗೆ ಬಾಸುಂಡೆ ತಿನ್ನಿಸಿದ. . . .

ನರಶಿಂಗರಾಯರು—ಈಜು ಕಲಿಸುತ್ತೇನೆ ಅಂತ ಹೇಳಿ ನನ್ನನ್ನ ಹೊಳೆಗೆ ಎತ್ತಿ ಹಾಕಿದ, ಈ ಹೋತ!

ಕೇಶವಯ್ಯ [ಚಿತ್ರವನ್ನು ತೋರಿಸುತ್ತಾ]—ಮತ್ತೆ ಯಾಕೆ ಇವನಿಗೆ ಈ ಮರ್ಯಾದೆ?

ನರಶಿಂಗರಾಯರು—ನಿನಗೆ ಬುದ್ಧಿ ಇಲ್ಲ . . . ಅಷ್ಟೆ! . . . ಕೇರೆಹಾವು! ಲೋ! ಬಾಗಿಲುಹಾಕು! ಯೋಚನೆಮಾಡೋಣ. . . . ಇವನಿಗೆ ಈಗಲೇ ತಕ್ಕ ಮರ್ಯಾದೆ ಮಾಡಿಬಿಡೋಣ. . . . [ಚಿತ್ರದ ಹತ್ತಿರಕ್ಕೆ ಹೋಗುವರು.]

ಕೇಶವಯ್ಯ—ಬಾಗಿಲು ಯಾಕೆ ಹಾಕಬೇಕು? ಅಯ್ಯೋ! ಪೆಚ್ಚ! . . . ಈ ರೂಮಿಗೆ ಬಾಗಿಲೇ ಇಲ್ಲವಲ್ಲೋ, ಅಷ್ಟು ಗೊತ್ತಿಲ್ಲವೆ?

ನರಶಿಂಗರಾಯರು—ತಪ್ಪಾಯ್ತು, ಕ್ಷಮಿಸು! . . . ಅನಾವರಣಕ್ಕೆ ಅಂತ ಬರೀ ಚೌಕಟ್ಟಿಟ್ಟುಬಿಡೋಣ. . . . ಚಿತ್ರಾನ ಹರಿದುಬಿಡೋಣ!

ಕೇಶವಯ್ಯ—ಒಳ್ಳೇ ಯೋಚನೆ. . . . ಆ ಡ್ರಾಯಿಂಗ್ ಮೇಷ್ಟ್ರು ಬರೆದದ್ದು ಅದನ್ನ. . . . ಶುದ್ಧ ಅವಲಕ್ಷಣ. . . .

ನರಶಿಂಗರಾಯರು [ನಗುತ್ತ]—ಆಮೇಲೆ ನಾನು ಆ ತುಂಬಿದ ಸಭೆಯಲ್ಲಿ . . . ನಿಧಾನವಾಗಿ . . . [ಮೇಲೆ ಮುಸುಕಿದ್ದ ಬಟ್ಟೆಯನ್ನು ಎಳೆಯುತ್ತಾ] ಹೀಗೆ ಎಳೆಯುವಾಗ ಅಲ್ಲಿ ಏನಿರುತ್ತೆ? ಹ . . . ಹ್ಹ . . . ಹ್ಹ! . . . ಬರೀ ಚಿದಂಬರ!

ಕೇಶವಯ್ಯ—ಬೇಡ! ಬೋಳ! ಚಿತ್ರವೂ ಇರಬೇಕು! ಥೀಮಾರೀನೂ ಆಗಬೇಕು. [ಮೇಜಿನ ಮೇಲಿಂದ ಕಪ್ಪುಶಾಯಿ ಸೀಸೆಯನ್ನು ಕೈಗೆ ತೆಗೆದುಕೊಂಡು] ವಕ್ರವಕ್ರವಾಗಿ ಮೀಸೆ ಬಳಿದುಬಿಡೋಣ . . . ಮಂಗನಿಗೆ. . . .

ನರಶಿಂಗರಾಯರು [ಕೆಂಪುಶಾಯಿ ಸೀಸೆಯನ್ನು ಕೈಗೆ ತೆಗೆದುಕೊಂಡು] ಹುಂ, ಕೆಂಪುಶಾಯಿ ಯಲ್ಲೇ ಬಳಿಯೋಣ, ಅದೇ ಚೆನ್ನ!

ಕೇಶವಯ್ಯ [ಕುಣಿಕುಣಿಯುತ್ತಾ]—ಒಳ್ಳೇ ಯೋಚನೆ.

[ಇಬ್ಬರೂ ಚಿತ್ರದ ಹತ್ತಿರ ಹೋಗಿ, ಬೆರಳನ್ನು ಶಾಯಿಯಲ್ಲಿ ಅದ್ದಿ, ಒಬ್ಬರು ಬಲಗಡೆ ಒಬ್ಬರು ಎಡಗಡೆ, ಮೀಸೆ ಬಳಿಯುವರು. . . . ಆಮೇಲೆ ಎರಡು ಹೆಜ್ಜೆ ಹಿಂದಕ್ಕೆ ಸರಿದು ನೋಡಿ ನಗುವರು.]

ಕೇಶವಯ್ಯ—ದೊಡ್ಡ ಮುದ್ದಣ್ಣ !

ನರಶಿಂಗರಾಯರು—ಲೋ ! ಗೊಡ್ಡಣ್ಣ !

[ಒಳಗೆ ಯಾರೋ 'ಸ್ವಾಮಿ' ಅಂತ ಕೂಗುವರು]

ಕೇಶವಯ್ಯ—ಅಯ್ಯೋ ! ಯಾರೋ ಬಂದರು. ಮುದ್ದಣ್ಣನನ್ನು ಮುಚ್ಚೋ ಯಥಾಪ್ರಕಾರ ! [ನರಶಿಂಗರಾಯರು ಆವರಣಮಾಡುವರು ; ಕೇಶವಯ್ಯನು ಬಾಗಿಲ ಬಳಿಗೆ ಹೋಗುವರು ; ಜವಾನ ಕಾಣಿಸಿಕೊಳ್ಳುವನು.]

ಜವಾನ [ವಿನಯದಿಂದ]—ಡೆಪ್ಟಿ ಕಮಿಷನರ್ ಸಾಹೇಬರು ಬಂದಿದಾರೆ, ಸ್ವಾಮಿ ! ಕಾರಿಂದ ಇಳಿಯುತ್ತಾ ಇದಾರೆ. . . .

ಕೇಶವಯ್ಯ [ಚೇತರಿಸಿಕೊಂಡು]—ನರಶಿಂಗರಾವ್ ! ಬನ್ನಿ ! ಹೋಗೋಣ. . . . ಲೋ ! ಈ ಚಿತ್ರಾನ ಮೆಲ್ಲಗೆ ಹಾಗೆಯೇ ತೆಗೆದುಕೊಂಡು ಹೋಗಿ ಹಾಲ್ ನಲ್ಲಿಡು ! ಬಟ್ಟೆ ದಾರ ಎಲ್ಲಾ ಹಾಗೆಯೇ ಇರಬೇಕು. ಅಲ್ಲಾಡಿಸಬಾರದು. [ಹೆಡ್ಮೇಷ್ಟ್ರು ನರಶಿಂಗರಾಯರೂ ಹೊರಡುವರು. ಜವಾನ ನಿಧಾನವಾಗಿ ಜಾಗರೂಕತೆಯಿಂದ ಭಾವಚಿತ್ರವನ್ನು ತ್ರಿಪಾದಸಹಿತವಾಗಿ ತೆಗೆದುಕೊಂಡು ಹೋಗುವನು.]

[ತೆರೆ.]

---

## ದೃಶ್ಯ ೪

ರಾತ್ರಿ ೭-೩೦ ; ಅದೇ ಕೊಠಡಿ. ಮೂಲೆಯಲ್ಲಿ ಅನಾವರಣವಾದ ಚಿತ್ರವಿದೆ.

[ಕೇಶವಯ್ಯನವರೂ ನರಶಿಂಗರಾಯರೂ ಖಿನ್ನವದನರಾಗಿ ನಿಶ್ಚೇತನರಾಗಿ ಮೇಜಿನ ಪಕ್ಕ ಎಡಬಲದ ಕುರ್ಚಿಗಳಲ್ಲಿ ಕುಳಿತು ಕೊರಗುತ್ತಿರುವರು].

ನರಶಿಂಗರಾಯರು—ನೀನೇನು ಬೇಕಾದರೂ ಬೈದುಕೊ. ನಾನು ಉತ್ತರ ಹೇಳುವ ಸ್ಥಿತಿಯಲ್ಲಿಲ್ಲ. . . ಆ ಹಾಳು ಚೂರ್ಣವನ್ನ ನಾನು ತಂದದ್ದೇ ಬಂತು ತಾಪತ್ರಯ ! . . . ಅವಳು ಬೇರೆ ಇದ್ದಳು ಸಭೆಯಲ್ಲಿ ಈ ಅವಾಂತರ ನೋಡು ವುದಕ್ಕೆ ; ಬಂದೇ ಬರುತ್ತೇನೆ. ಚೂರ್ಣದ ಪ್ರಭಾವ ಹೇಗಿದೆ ನೋಡುತ್ತೇನೆ ಅಂದಳು. . . .

ಕೇಶವಯ್ಯ [ರೇಗಿ]—ಅದನ್ನ ನನಗೂ ತಿನ್ನಿಸಿದೆಯಲ್ಲಾ, ಸುಮ್ಮನಿರಲಾರದೆ! ಇಲ್ಲದೆ ಇದ್ದರೆ . . . ಒಬ್ಬನಿಗಾದರೂ ಜ್ಞಾನ ನೆಟ್ಟಗಿರುತ್ತಿತ್ತು.

ನರಶಿಂಗರಾಯರು—ನೋಡು! ಕೈವಿಾರಿ ಹೋದದ್ದು ಕೃಷ್ಣಾರ್ಪಣ! ಇನ್ನೊಂದು ಚಿತ್ರ ಬರೆಸು. ಅದರ ಖರ್ಜು ನಾನು ಕೊಡುತ್ತೇನೆ.

ಕೇಶವಯ್ಯ—ನರಶಿಂಗರಾವ್! ವಿಷಯ ಎಷ್ಟು ಪ್ರಮಾದಕ್ಕಿಟ್ಟುಕೊಂಡಿದೆ ಅಂತ ನಿನಗಿನ್ನೂ ಗೋತ್ತಾಗಿಲ್ಲ! ಅನಾವರಣ ಮಾಡಿದಾಗ ಆಯಿತಲ್ಲಾ ಗಲಾಟೆ, ಅಷ್ಟಕ್ಕೇ ಮುಗಿಯಿತು, ಅಂತ ತಿಳಿದೆಯೇನು? ಹದಿಮೂರು ವರ್ಷ ಈ ಸ್ಕೂಲಲ್ಲಿ ಮೇಷ್ಟರಾಗಿದ್ದೆ! ಆರು ವರ್ಷದಿಂದ ಹೆಡ್ಮೇಷ್ಟರಾಗಿದ್ದೇನೆ! ಎಂಟು ಮಕ್ಕಳ ತಂದೆ; ತಂಗಿಯೊಬ್ಬಳು ವಿಧವೆ! ಅಂಥಾದ್ದರಲ್ಲಿ ನಿನ್ನ ಈ ಹಾಳು ಚೂರ್ಣದಿಂದ ನನ್ನ ಸಂಸಾರದ ಬಾಯಿಗೆ ಸೊನ್ನೆ ಬಿತ್ತಲ್ಲೋ!

ನರಶಿಂಗರಾಯರು [ದಿಕ್ಕು ತೋಚದೆ]—ದೊಡ್ಡಮುದ್ದಣ್ಣನ ಮನೆ ಪ್ರೈವೇಟ್ ಟ್ಯೂಷನ್ ತಪ್ಪಿತು ಅಂತಲೇ? ನಾವು ಬೇಕಾದರೆ ತಿಂಗಳಿಗೆ ಆರು ರೂಪಾಯಿ . . .

ಕೇಶವಯ್ಯ [ರೇಗಿ]—ಹೋಗಯ್ಯ, ಹುಚ್ಚ; . . . ಜನಗಳೆಲ್ಲರೂ ಎದ್ದು ಹೋಗುತ್ತಿದ್ದಾಗ ಡಿ.ಸಿ. ಯವರು "ಏಳೂವರೆಗೆ ಬರುತ್ತೇನೆ ಮಾತಾಡೋಣ" ಅಂತ ಹೇಳಿದ್ದರ ಅರ್ಥ ಗೊತ್ತಾಗಿಲ್ಲವೇ ನಿನಗೆ! [ವ್ಯಸನದಿಂದ] ಅರ್ಧ ಚಂದ್ರ, ಕಣೊ, ನನಗೆ. . . . ಅರ್ಧಚಂದ್ರ!

ನರಶಿಂಗರಾಯರು—ಏನು?

ಕೇಶವಯ್ಯ—ಕೈಗೆ ಕರಟ!

ನರಶಿಂಗರಾಯರು—ಅದು ಹೇಗೆ? ನಾನೂನೂ ಸೇರಿದ್ದೆನಲ್ಲಾ, ಇದಕ್ಕೆ. . .

ಕೇಶವಯ್ಯ—ಆ ಸಮಾಚಾರ ಗೊತ್ತಾದರೆ ನಿನ್ನನ್ನ ನೆಟ್ಟಗೆ ಹುಚ್ಚಾಸ್ಪತ್ರೆಗೆ ಕಳುಹಿಸುತ್ತಾರೆ, ಅಷ್ಟೆ! [ಒಳಗೆ ಯಾರೋ ಕೆಮ್ಮುವರು.] ಯಾರೂ?

[ಜವಾನ ಒಳಗೆ ಬಂದು, ಪಟ ನೋಡಿ ನಗುವನ್ನು ತಡೆದು, 'ಡಿ.ಸಿ. ಸಾಹೇಬರು ಬರುತ್ತಾ ಇದಾರೆ' ಅಂತ ಹೇಳಿ ಮಾಯವಾಗುವನು. ಗೆಳೆಯರಿಬ್ಬರೂ ಪೆಚ್ಚುಮೋರೆ ಸಹಿತವಾಗಿ ಎದ್ದುನಿಂತು ತಲೆಬಾಗುವರು. ಡಿ.ಸಿ. ಸಾಹೇಬರ ಪ್ರವೇಶ.]

ಡಿ.ಸಿ. [ಅಧಿಕಾರವಾಣಿಯಿಂದ]—ಹೆಡ್ಮೇಷ್ಟ್ರೇ!

ಕೇಶವಯ್ಯ [ಅಂಗಲಾಚಿ]—ಕ್ಷಮಿಸಬೇಕು, ಸಾರ್! ಯಾರೋ ದುರಾತ್ಮರು ನನ್ನ ಮೇಲಿನ ದ್ವೇಷಕ್ಕೆ. . . .

ನರಶಿಂಗರಾಯರು [ಗೆಳೆಯನಿಗೆ ನೆರವಾಗುತ್ತಾ]—ಇಲ್ಲಿಯ ಮೇಷ್ಟರುಗಳು ನಮ್ಮ ಕೇಶವಯ್ಯನವರ ಮೇಲೆ ಅಕಾರಣವಾಗಿ ರೇಗಿ ಅವರೊಂದಿಗೆ ಸಹಕರಿಸದೆ. . . .

ಡಿ.ಸಿ. [ರೇಗಿ]—ನೀವು ಸುಮ್ಮನಿರಿ! . . . ಹೆಡ್ಮೇಷ್ಟ್ರೇ! ಚಿತ್ರಕ್ಕೆ ಚೌಕಟ್ಟು ಹಾಕಿದ್ದು ನೀವು! ಆ ಲಾಗಾಯಿತು ಇದು ಈ ರೂಮಿನಲ್ಲಿ ತಾನೇ ಇದ್ದದ್ದು?

ಕೇಶವಯ್ಯ—ಅದೇ, ಸಾರ್! ನನಗೂ ಆಶ್ಚರ್ಯ!

ನರಶಿಂಗರಾಯರು [ಅಡ್ಡ ಬಂದು]—ಆಶ್ಚರ್ಯವೇನೂ ಇಲ್ಲ, ಸಾರ್! ಇಲಿಯೋ ಹೆಗ್ಗಣವೋ ಓಡಾಡಿದಾಗ ಕೆಂಪುಶಾಯಿ ಚೆಲ್ಲಿರಬಹುದು ಅಂತ ತೋರುತ್ತದೆ, ಸಾರ್, ನನ್ನ ಬುದ್ಧಿಗೆ!

ಡಿ.ಸಿ.—ಹೌದು ಹೌದು! ನಿಮ್ಮದು ಒಂದು ವಿಶೇಷ ರೀತಿಯ ವಿಚಿತ್ರ ಬುದ್ಧಿ.

ನರಶಿಂಗರಾಯರು [ಪರಿಹಾಸ್ಯವನ್ನು ಅರ್ಥಮಾಡಿಕೊಳ್ಳದೆ]—ಏನೋ, ಸಾರ್! ತಮ್ಮ ಆಶೀರ್ವಾದ!

ಡಿ.ಸಿ. [ಬೇಜಾರಿಂದ]—ಅಲ್ರಿ! ನರಶಿಂಗರಾವ್! ಅದು ಹೇಗ್ರಿ ಸಾಧ್ಯ?

ನರಶಿಂಗರಾಯರು—ಹೆಗ್ಗಣದ ಬಾಲ [ಕೆಂಪು ಮೀಸೆಯ ಮೇಲೆ ಬೆರಳೋಡಿಸುತ್ತಾ] ಹೀಗೆ ಬಂದು ಹಾಗೆ ಹಾದು ಹೋಗಿರಬಹುದು, ಸಾರ್!

ಡಿ.ಸಿ. [ಕೋಪದಿಂದ]—ಹೆಗ್ಗಣಕ್ಕೂ ರಾವ್ ಬಹದ್ದೂರ್ ದೊಡ್ಡಮುದ್ದಣ್ಣನವರಿಗೂ ಏನ್ರಿ ಸಂಬಂಧ?

ಕೇಶವಯ್ಯ [ಅಡ್ಡಬಂದು]—ಯಾರೋ ಹುಚ್ಚರು ಮಾಡಿರುವ ಕುಚೇಷ್ಟೆ, ಸಾರ್! ಇದು. ಇದಕ್ಕಾಗಿ ತಾವು ನನ್ನ ಮೇಲೆ ರೇಗಬಾರದು ಅಂತ ಕೇಳಿಕೊಳ್ಳುತ್ತೇನೆ. [ವ್ಯಸನದಿಂದ] ಬಡವ, ಸಾರ್! ಮಕ್ಕಳೊಂದಿಗ! ಸುದಾಮ! [ಕಣ್ಣೊರಸಿಕೊಳ್ಳುವರು]

ನರಶಿಂಗರಾಯರು—ಕೇವಲ ಹುಡುಗಾಟ ಇರಬೇಕು, ಯಾರದೋ!

ಡಿ.ಸಿ.—ಅಂಥ ಹುಡುಗರನ್ನ ಅಡಗಿಸಿ ಅಂತ ಇವರ ಕೈಲಿ ಚಿತ್ರಕೊಟ್ಟು ಕೂರಿಸಿದ್ದೇವೆ; ಈಗ ಇವರೇ ಸ್ಪಷ್ಟವಾಗಿ ಅಳುತ್ತಾ ಕೂತರೆ ಹೇಗೆ?

ಕೇಶವಯ್ಯ—ನನ್ನ ಕೈಕೆಳಗಿನ ಹುಡುಗರು ಯಾರೂ ಈ ಕೃತ್ಯ ನಡೆಸಿಲ್ಲ ಅಂತ ಧೈರ್ಯವಾಗಿ ಹೇಳಬಲ್ಲೆ. . . .

ನರಶಿಂಗರಾಯರು—ಅದು ನ್ಯಾಯವಾದ ಮಾತು! ಹುಡುಗರಿಗೆ ಹೊಳೆಯುವುದಿಲ್ಲ, ಸಾರ್, ಮೀಸೆಗೀಸೆ ಚೇಷ್ಟೆಗಳು; ನನ್ನದೊಂದು ಸಲಹೆ ಇದೆ.

ಡಿ.ಸಿ.—ನೀವು ನಡುವೆ ಬಾಯಿಹಾಕಬೇಡಿ! ನಿಮಗೆ ವರ್ಗ ಆಗಿಲ್ಲವೇನ್ರಿ? ಹೊರಡಿ ಮತ್ತೆ. ನಿಮಗೂ ಈ ಊರಿಗೂ ಋಣಾನುಬಂಧ ತೀರಿತಲ್ಲಾ. . . .

ಕೇಶವಯ್ಯ—ಎ.ಸಿ. ಸಾಹೇಬರ ಸಲಹೆ ಏನು ಅಂತ ಕೇಳೋಣ, ಸಾರ್!

ನರಶಿಂಗರಾಯರು—ಇನ್ನೇನೂ ಇಲ್ಲ! ಈ ಕೆಂಚುವಿನಾಸೆ ಪ್ರಕರಣವನ್ನ ವಿವರವಾಗಿ ಪೇಪರುಗಳಲ್ಲಿ ಪ್ರಕಟಿಸಿಬಿಟ್ಟು, 'ಕೃತ್ಯ ನಡೆಸಿದವರನ್ನ ಹಿಡಿದು ತರುವವರಿಗೆ ೨೫ ರೂಪಾಯಿ ಇನಾಮು' ಅಂತ ಆಸೆ ತೋರಿಸಿದರೆ . . .

[ಜವಾನ ಪ್ರವೇಶಿಸುವನು]

ಜವಾನ—ಯಾವನೋ ಒಬ್ಬ ಹುಡುಗ ಬಂದಿದಾನೆ, ಸ್ವಾಮಿ!

ಕೇಶವಯ್ಯ—ಓಡಿಸು, ಅವನನ್ನ! ಈಗ ಯಾವುದಕ್ಕೂ ಸಮಯ ಇಲ್ಲ ಅನ್ನು.

ಜವಾನ—ಈಗಲೇ ತಮ್ಮನ್ನ ಕಾಣಬೇಕು ಅಂತ ಹಠಹಿಡಿದಿದಾನೆ.

ಡಿ.ಸಿ.—ನೋಡಿದಿರೇನ್ರಿ! ಹೇಗಿದೆ ನಿಮ್ಮ ಶಿಸ್ತು! ಹೋಗು ಅಂದರೆ ಹೋಗುವುದಿಲ್ಲ ನಿಮ್ಮ ಹುಡುಗರು; ಬಾ ಅಂದರೆ ಬರುವುದಿಲ್ಲ. . . .

ಜವಾನ—ಫೋರ್ತ್ ಫಾರಂ. ಎ. ಹುಡುಗ . . .

ಕೇಶವಯ್ಯ—ಫೋರ್ತ್ ಫಾರಂನವನಾಗಲಿ, ಸಿಕ್ಸ್ತ್ ಫಾರಂನವನಾಗಲಿ, ಸಮಯ ಇಲ್ಲ, ಅನ್ನು! ಆಚೆಗೆ ದಬ್ಬು!

ಜವಾನ—ದಬ್ಬಿದರೆ ಹೋಗುವುದಿಲ್ಲ, ಸ್ವಾಮಿ!

ಡಿ.ಸಿ.—ಲೋ! ಇಲ್ಲಿ ಕರೆಸೋ ಆ ಪೋಕರೀನ! ನಾನು ಬುದ್ಧಿ ಹೇಳಿ ಸರಿಪಡಿಸುತ್ತೇನೆ.

ಜವಾನ—ಈ ವಿನಾಸೆ ವಿಷಯ ಗೊತ್ತಂತೆ ಅವನಿಗೆ. . . .

ಕೇಶವಯ್ಯ—ಹಾ!

ನರಶಿಂಗರಾಯರು—ಹಾ!

ಕೇಶವಯ್ಯ—ಅವನಿಗೆ ಹೇಳು! ನಾವು ಪೇಪರಿನಲ್ಲಿ ಹಾಕುತ್ತೇವೆ; ಬಹುಮಾನ ಕೊಡುತ್ತೇವೆ; ನಾಳೆನಾಡಿದ್ದು ಬರುತ್ತೆ; ಅದನ್ನ ನೋಡಿಕೊಂಡು. . . .

ಡಿ.ಸಿ.—ಹೆಡ್ಮೇಷ್ಟ್ರೇ! ಕೊಂಚ ಸುಮ್ಮನಿರಿ ನೀವು. . . . (ಜವಾನನಿಗೆ) ಕರೆದುಕೊಂಡು ಬಾರೋ ಒಳಕ್ಕೆ. . . .

ಕೇಶವಯ್ಯ [ಕಕ್ಕಾ]

ನರಶಿಂಗರಾಯರು [ಬಿಕ್ಕಿ]

[ಜೀ. ವಿ. ಪಂಡಿತನ ಪ್ರವೇಶ]

ಡಿ.ಸಿ.—ಬಾರೋ ಇಲ್ಲಿ! ಚಿತ್ರಕ್ಕೆ ಮೀಸೆ ಬಳದದ್ದು ಯಾರೋ?

ನರಶಿಂಗರಾಯರು [ತಡೆದು]—ನಾವಿಬ್ಬರೂ ನಿಧಾನವಾಗಿ ಅವನನ್ನು ವಿಚಾರಿಸಿ. . . .

ಡಿ.ಸಿ.—ಸದ್ದು! ಕೆಂಚು ಮೀಸೆ ಬಳದದ್ದು. . . .

ಕೇಶವಯ್ಯ [ಹುಡುಗನನ್ನೆಳೆದು]—ತಮ್ಮನ್ನ ಕಂಡರೆ ಹೆದರುತ್ತಾನೆ, ಸಾರ್! ಹಸುಳೆ!

ಹುಡುಗ—ಇಲ್ಲ, ಸಾರ್! ಹೆದರಿಕೆ ಇಲ್ಲ, ಸಾರ್! ಹೇಳಿಬಿಡುತ್ತೇನೆ, ಸಾರ್, ನನಗೆ ಗೊತ್ತುಸಾರ್! ಯಾರೂ ಅಂತ.

ಕೇಶವಯ್ಯ—ತಲೆಹರಟೆ ತೆಗಿಯಬೇಡ! ಬಾಯಿಮುಚ್ಚಿಕೊಂಡು ಹೋಗೋ! [ಹೊಡೆಯುವುದಕ್ಕೆ ಅಣಿಯಾಗುವರು.] ತೊಲಗೊ ಇಲ್ಲಿಂದ. . . .

ಹುಡುಗ—ಕ್ಷಮಿಸಿ, ಸಾರ್! ನಾನೇ, ಸಾರ್, ಬಳಿದದ್ದು! ನಾನೇ ಸಾರ್!

ಡಿ.ಸಿ. [ಮೇಜಿನ ಮೇಲಿದ್ದ ಚಿತ್ತವನ್ನು ಎತ್ತಿ]— . . . . ಆ!

ಕೇಶವಯ್ಯ—ನಿನ್ನ ಹೆಸರೇನೋ?

ಡಿ.ಸಿ.—ಹೆಸರೇನಾದರೂ ಆಗಲಿ, ಹೊಡೆದುಹಾಕಿ ರಿಜಿಸ್ಟರಿಂದ. . . . [ಬೆನ್ನ ಮೇಲೊಂದು ಬಾರಿಸಿ] ಯಾಕೊ ಮೀಸೆ ಬಳಿದೆ ರಾವ್‌ಬಹದ್ದೂರಿಗೆ. . . .

ಹುಡುಗ [ಅಳುತ್ತಾ]—ನನಗೆ ಗೊತ್ತಾಗಲಿಲ್ಲ, ಸಾರ್! ಹೀಗೆ ಬಂದೆ, ಸಾರ್! ಇಲ್ಲಿ ಯಾರೂ ಇರಲಿಲ್ಲ, ಸಾರ್! ರಾವ್‌ಬಹದ್ದೂರ್ ಒಂದೇ ಇತ್ತು, ಸಾರ್! ಕೆಂಪು ಶಾಯಿೞಸೂ ಇತ್ತು, ಸಾರ್! ಅನ್ಯಾಯವಾಗಿ ಶಾಯಿ ನಷ್ಟವಾಗುತ್ತಲ್ಲಾ ಅಂತ ಬಳಿದುಬಿಟ್ಟೆ, ಸಾರ್!

ಡಿ.ಸಿ. [ಕಿಡಿಕಿಡಿಯಾಗಿ]—ನಿನ್ನನ್ನ ಡಿಸ್ಮಿಸ್ ಮಾಡಿದರೆ ಸಾಲದು! ದಿನವೂ ಬೆಳಗ್ಗೆ ಸಾಯಂಕಾಲ ಹತ್ತು ಹತ್ತು ಛಡಿ ಏಟು ಬೀಳಬೇಕು ನಿನಗೆ. . . . ಆಗ ಬುದ್ಧಿ ಸೆಟ್ಟಗಾಗುತ್ತೆ. . . . ಒಂದು ಗಜ ಕಾಗದ ಕೊಡಿರಿ, ಹೆಡ್ಮೇಷ್ಟ್ರು, ಆರ್ಡರ್ ಮಾಡಿಬಿಡುತ್ತೇನೆ. . . .

ನರಶಿಂಗರಾಯರು—ಅಷ್ಟು ರೇಗಬಾರದು, ಸಾರ್! ಚಿಕ್ಕಮಕ್ಕಳ ಮೇಲೆ. . . . ತಮ್ಮ ಮಕ್ಕಳು ಮಾಡಿದರೆ ಹೇಗೋ ಹಾಗೆ ಭಾವಿಸಿ ಕ್ಷಮಿಸಬೇಕು, ಸಾರ್!

ಕೇಶವಯ್ಯ [ತಿರುಗಿಬಿದ್ದು]—ಸಾರ್! ತಾವೇನೋ ಪ್ರೆಸಿಡೆಂಟ್ ಹೌದು. . . . ಆದರೆ, ಒಂದು ಮಾತು. ನನಗೂನೂ ಅನುಭವಿಸಿ ಅನುಭವಿಸಿ ಸಾಕಾಯಿತು. ಈ ಸ್ಕೂಲಿನ ಒಳ ಆಡಳಿತ, ಶಿಸ್ತು, ಕ್ರಮ, ಪಾಠ ಪ್ರವಚನ ಪಾರುಪತ್ಯ ಇವೆಲ್ಲ ನನಗೆ ಸೇರಿದ್ದು, ನೆನಪಿರಲಿ!

ಡಿ.ಸಿ. [ಎದ್ದು]—ಎಷ್ಟ್ರೀ ನಿಮ್ಮ ದುರಹಂಕಾರ!

ಕೇಶವಯ್ಯ [ಹತ್ತಿರ ಹೋಗಿ]—ಹೀಗೆ ನೀವು ಸಲಸಲಕ್ಕೂ ನನ್ನ ಮೇಲೆ ಕಾರ್ಯಭಾರ ಮಾಡಿ ಮೇಷ್ಟರುಗಳನ್ನ ಹುಡುಗರನ್ನ ಎತ್ತಿಕಟ್ಟಿದ್ದರಿಂದಲೇ ಈ ಸ್ಕೂಲು ಈ ಗತಿಗಿಳಿದಿರುವುದು. . . . ಗೊತ್ತೆ? ಸಾರ್!

ಡಿ.ಸಿ.—ಹಾಳಾಗಿ ಹೋಯಿತು! ನನಗೇನು? [ಹೊರಡುತ್ತಾ] ಹಾಳಾಗಿ ಹೋಗಲಿ [ಹೊರಡುವರು.]

ನರಶಿಂಗರಾಯರು [ಕೊಂಚ ಹೊತ್ತಿನ ಮೇಲೆ ಹುಡುಗನ ತಲೆ ಸವರುತ್ತಾ]—ಇಲ್ಲಿ ಬಾರಯ್ಯಾ ಹುಡುಗ! ನೀನಲ್ಲವಲ್ಲೊ ಬಳಿದದ್ದು?

ಕೇಶವಯ್ಯ [ಅವನ ಭುಜವನ್ನು ತಟ್ಟಿ]—ಯಾಕೊ ಸುಳ್ಳು ಹೇಳಿದೆ?

ಹುಡುಗ—ನಮ್ಮಪ್ಪ ಹೇಳಿದ ಸಾರ್! ಹೋಗಿ ಒಪ್ಪಿಕೊಂಡುಬಿಡು ಅಂತ. ಹೊಡೆಯುವುದಿಲ್ಲ ಅಂದ, ಸಾರ್! ನೋಯುತ್ತೆ, ಸಾರ್, ಬೆನ್ನು!

ನರಶಿಂಗರಾಯರು [ಅವನ ಬೆನ್ನು ಸವರುತ್ತಾ]—ಯಾರು ಹೇಳಿದರು?

ಹುಡುಗ—ನಮ್ಮ ತಂದೆ.

ಕೇಶವಯ್ಯ—ನಿನ್ನ ತಂದೆ ಹೆಸರೇನು?

ಹುಡುಗ—ಗುಂಡುಪಂಡಿತ!

ನರಶಿಂಗರಾಯರು—ಗುಂಡುಪಂಡಿತ!

["ಇಕೋ! ಬಂದೆ!" ಅಂತ ಹೇಳುತ್ತಾ ಗುಂಡುಪಂಡಿತನ ಪ್ರವೇಶ] ಏನಯ್ಯಾ! ಗುಂಡೂ! ನಿನ್ನಿಂದ ನಾವು ಹಾಳಾದೆವಲ್ಲೊ! ತೆಪ್ಪಗಿದ್ದವರಿಗೆ ಬೆಪ್ಪುಹಿಡಿಸಿ. . . .

ಗುಂಡುಪಂಡಿತ [ಅಡ್ಡಬಂದು]—ಅದನ್ನೆಲ್ಲಾ ನರಸಮ್ಮ ಬಂದು ಹೇಳಿದಳು, ಮಾವಯ್ಯ! ಪಾಪ! ಅವಳು ಹೀಗೆ ರೇಗಿದ್ದನ್ನೇ ನಾನು ಎಂದೂ ನೋಡಿರಲಿಲ್ಲ. . . .

ನರಶಿಂಗರಾಯರು—ಈಗ ಎಲ್ಲಿ ಅವಳು? ಇಲ್ಲೇ ಇದಾಳೆಯೇ?

ಗುಂಡುಪಂಡಿತ—ಇಲ್ಲ, ಇಲ್ಲ. . . . ಮನೆಯಲ್ಲಿ; ಈಗ ಗೆಲುವಾಗಿದಾಳೆ. ಸಮಾಧಾನಪಡಿಸಿದೆ. . . . ಮಾವಯ್ಯ! ನೀವು ಚೂರ್ಣತಿಂದ ಪರಿಮಾಣ ಕೊಂಚ ಹೆಚ್ಚು. ಅದಕ್ಕೇ ಈ ಪರಿಣಾಮವಾದದ್ದು! . . .

ಕೇಶವಯ್ಯ—ಅದಿರಲಿ! ಈ ಹುಡುಗ ತಾನೇ ಮಾಡಿದ್ದು ಅಂತಾನಲ್ಲಾ, ಅದು ಹೇಗೆ. . . .

ಗುಂಡುಪಂಡಿತ—ತಡೆಯಿರಿ, ಹೇಳುತ್ತೇನೆ. . . . ನೀವು ಸೇವಿಸಿದ ಚೂರ್ಣ ವೈಸರಾಯ್ ಗವರ್ನರ್ ಮುಂತಾದವರು ಬಂದಾಗ, ಅಥವಾ, ಆನೆಯಕಾಟ ಹೆಚ್ಚಾದಾಗ, ಕಾಕನಕೋಟೆಯ ಹತ್ತಿರ ಖೆಡ್ಡಾ ಅಂತ ಹೇಳಿ ಕಾಡಾನೆಗಳನ್ನು

ಹಿಂಡುಹಿಂಡಾಗಿ ಹಿಡಿಯುತ್ತಾರಲ್ಲಾ, ಆಗ, ಪಳಗಿದ ಆನೆಗಳಿಗೆ ಈ ಚೂರ್ಣ ಕೊಟ್ಟು ಅವುಗಳಿಗೆ ಧೈರ್ಯ ಸಾಹಸ ಉಂಟುಮಾಡಿ, ಅವುಗಳನ್ನ ಮೆತ್ತಗೆ ಖೆಡ್ಡಾದೊಳಕ್ಕೆ ಕರೆದುಕೊಂಡು ಹೋಗುತ್ತಾರೆ. . . . "ಗಜಕ್ಕೆ ಗುಲಗಂಜಿಯೇ ಅಕ್ಕಂ" ಅಂತ ಶಾಸ್ತ್ರ ಇರುವಾಗ ನೀವು ಎಷ್ಟು ಪರಿಮಾಣ ಹಾಕಿಕೊಳ್ಳಬೇಕು, ನೋಡಿಕೊಳ್ಳಿ. ಅದಕ್ಕೆ ಬದಲಾಗಿ, ಜಾಸ್ತಿ ಬಿದ್ದುಬಿಟ್ಟಿತು ಅಂತ ಕಾಣುತ್ತೆ ಬಟ್ಟಲೊಳಗೆ.

ಕೇಶವಯ್ಯ—ಹಾಗಾದರೆ, ಈ ಗೋಡೆಗಳುಳಿದದ್ದೇ ಹೆಚ್ಚು ಅನ್ನು! ನಮ್ಮ ರಭಸದಲ್ಲಿ.

ಗುಂಡುಪಂಡಿತ—ಹುಂ! ಸರಸಮ್ಮ ಬಂದು ರೇಗಾಡಿದಾಗ, ಯಾತರಿಂದ ಹೀಗಾಯಿತು ಅಂತ ತಿಳಿದುಕೊಂಡೆ. ಸರಿ! ನಮ್ಮ ಹುಡುಗ, ಈ ಸ್ಕೂಲಲ್ಲೇ ಇದಾನೆ, ಅವನನ್ನ ಕರೆಸಿ ಹೋಗಿ ಒಪ್ಪಿಕೊಂಡುಬಿಡೋ ಅಂತ ಕಳುಹಿಸಿದೆ. . . .

ನರಶಿಂಗರಾಯರು—ಒಳ್ಳೇ ಕೆಲಸವಾಯಿತು. . . . [ಹುಡುಗನ ತಲೆ ಸವರುತ್ತಾ] ಜಾಣ ಹುಡುಗ! ಧೈರ್ಯವಾಗಿ ಬಂದು ಹೇಳಿದ. . . .

ಗುಂಡುಪಂಡಿತ—ಸದ್ಯಃ ಅವನೂನೂ ಹೊರಗೆ ಕಾದಿದ್ದು, '೨೫ ರೂಪಾಯಿ ಇನಾಮು' ಅಂತ ಕಿವಿಗೆ ಬೀಳುತ್ತಲೂ ಒಳಗೆ ನುಗ್ಗಿದ, ನೋಡಿ!

ನರಶಿಂಗರಾಯರು—ಕೊಡುತ್ತೇನೆ, ಗುಂಡು! ಅಂತು ಕೊಂಚಹೊತ್ತು ಎರಡು ನಾಡಾನೆಗಳನ್ನ ಕಾಡಾನೆ ಮಾಡಿಬಿಟ್ಟೆಯಲ್ಲಾ! ನಿನ್ನ ಕೈವಾಡ ನಿಜವಾಗಿಯೂ

ಕೇಶವಯ್ಯ—ಕೊಂಡಾಡತಕ್ಕದ್ದೇ!

[ತೆರೆ]

---

# ಕಲೆ ಮತ್ತು ನೀತಿ

ಕಲೆಯಲ್ಲಿ ನೀತಿಯುಂಟೆ? ಇದ್ದರೆ ಅದರ ಸ್ಥಾನವೇನು? ಅಥವಾ ಇಲ್ಲದಿದ್ದರೆ ಏಕೆ ಇಲ್ಲ? ಎಂಬುದನ್ನು ಲಾಕ್ಷಣಿಕರು ಕೂಲಂಕಷವಾಗಿ ವಿಚಾರಿಸಬೇಕು. ಏಕೆಂದರೆ, ಈ ಪ್ರಶ್ನೆ ಅಲ್ಪಜಿಜ್ಞಾಸೆಯಿಂದ ತೀರ್ಮಾನವಾಗದು. ಕಲಾನಿರ್ಮಾಣದ ತಳಹದಿಯನ್ನು ತಲುಪಿ ನೀತಿಯ ನಿಯಮಗಳನ್ನು ಅದಕ್ಕೆ ಅನ್ವಯಿಸಿದ ವಿನಾ ಇತ್ಯರ್ಥವಾಗದು.

ಕಲೆಯೊಂದು ರಸಸ್ಥಾನ, ಸೌಂದರ್ಯಸ್ಥಾನ ಮತ್ತು ಆನಂದಸ್ಥಾನ. ರಸ ನಿಷ್ಪತ್ತಿಯ, ಸೌಂದರ್ಯಸ್ವರೂಪದ ಮತ್ತು ಆನಂದಲಕ್ಷಣದ ನಿರ್ವಚನವಾದರೆ ಕಲೆಯ ಲಕ್ಷಣವನ್ನು ಗುರುತಿಸಿದಂತಾಯಿತು. ಮೊದಲು ರಸನಿಷ್ಪತ್ತಿಯನ್ನು ವಿವರಿಸೋಣ: "ವಿಭಾವಾನುಭಾವ ವ್ಯಭಿಚಾರಿಭಾವ ಸಂಯೋಗಾದ್ರಸನಿಷ್ಪತ್ತಿಃ" ಎಂದು ರಸದ ಉತ್ಪತ್ತಿಯ ಲಕ್ಷಣವನ್ನು ಹೇಳಲಾಗುವುದು. ಈ ಸೂತ್ರವನ್ನು ನಾವು ಶಾರೀರಕ ಮನಶ್ಶಾಸ್ತ್ರದ ಆಧಾರದ ಮೇಲೆ ವಿಭಜಿಸಿ ನೋಡೋಣ. ಇಂದ್ರಿಯ, ಮನಸ್ಸು ಮತ್ತು ಬುದ್ಧಿ ಇವುಗಳು ಜೀವದ ದ್ವಾರಗಳು. ಮಾನವ ಶರೀರದ ನರ ಮತ್ತು ನಾಡಿಗಳ ವ್ಯವಸ್ಥೆ ಈ ಮೂರಕ್ಕೆ ಸಾಧಕ. ಮನುಷ್ಯನ ಶರೀರದಲ್ಲಿ ಎರಡು ಬಗೆಯ ನಾಡೀವ್ಯವಸ್ಥೆಯಿದೆ. ಒಂದನ್ನು ಪ್ರಜ್ಞಾತ್ಮಕ, ಇನ್ನೊಂದನ್ನು ಭಾವನಾತ್ಮಕವೆಂದು ಹೇಳಬಹುದು. ಪ್ರಜ್ಞಾತ್ಮಕ ನಾಡೀವ್ಯವಸ್ಥೆಯ ಕೆಲಸವು ಬಾಹ್ಯಾನುಭವದ ಜ್ಞಾನವನ್ನು ಪಂಚೇಂದ್ರಿಯಗಳ ದ್ವಾರಾ ಬುದ್ಧಿ ಮನಸ್ಸುಗಳಿಗೆ ಮುಟ್ಟಿಸುವುದಾಗಿದೆ. ಇದರ ಪರಿಣಾಮವು ಭಾವನಾತ್ಮಕ ನಾಡಿಗಳ ಮೇಲಾಗಿ ಅನುಭಾವ ಮತ್ತು ವ್ಯಭಿಚಾರಿ ಭಾವಗಳುಂಟಾಗಿ ಸುಪ್ತವಾದ ಸ್ಥಾಯೀಭಾವಗಳು ಉದ್ರಿಕ್ತವಾಗುವುವು. ಆಗಲೆ ರಸನಿಷ್ಪತ್ತಿಯಾಗುವುದು. ಇದನ್ನು ಉದಾಹರಣೆಯಿಂದ ಸಿದ್ಧಿಸೋಣ. ನಾವು ಹುಣ್ಣಿಮೆಯ ರಾತ್ರಿ ಬೆಳದಿಂಗಳಲ್ಲಿ ತೋಟದಲ್ಲಿ ಸಂಚರಿಸುತ್ತಿರುವೆವೆಂದು ಭಾವಿಸೋಣ. ಬೆಳದಿಂಗಳ ತಂಪು ಸ್ಪರ್ಶೇಂದ್ರಿಯದ ಮೂಲಕ, ಅದರ ಹೊಳಪು ನೇತ್ರೇಂದ್ರಿಯದ ಮೂಲಕ, ಬುದ್ಧಿಗೆ ಗೋಚರವಾಗಿ ಮನಸ್ಸನ್ನು ಮುಟ್ಟುವುವು. ಮನಸ್ಸಿಗೆ ಭಾವನಾತ್ಮಕ ನಾಡಿಗಳ ಸಹಾಯದಿಂದ ಆ ಪರಿಸ್ಥಿತಿ ಇನ್ನೂ ಇರಬೇಕೆಂಬ ಬಯಕೆಯುಂಟಾಗುವುದು. ಮೊಗ್ಗು ಅರಳಿದಂತೆ ಮನಸ್ಸು ಅರಳುವುದು. ಈ ಅರಳುವಿಕೆಯಿಂದ ನಮ್ಮ ಅಂಗಾಂಗ

ಗಳಲ್ಲಿ ಕೆಲವು ಮಾರ್ಪಾಟುಗಳಾವುವು. ಈ ಸನ್ನಿವೇಶದ ಬಲದಿಂದ ನಮ್ಮ ಪ್ರೇಯಸಿ ಯರ ಜ್ಞಾಪಕವಾಗಿ ವಿಪ್ರಲಂಭಾವಸ್ಥೆಯುಂಟಾಗುವುದು. ಈ ಅವಸ್ಥೆಯಲ್ಲಿ ಮನಸ್ಸು ಅನುಭವಿಸುತ್ತಿರುವ ತಾದಾತ್ಮ್ಯವನ್ನು ವಿಪ್ರಲಂಭಶೃಂಗಾರವೆಂದು ಹೇಳು ವರು. ಮನುಷ್ಯನ ಹೃದಯದಲ್ಲಿ ಸುಪ್ತವಾದ ಅನುಭವಗಳು ಮತ್ತು ಆ ಅನು ಭವಗಳಿಂದುಂಟಾದ ಸಹಜ ವಾಸನೆಗಳು ಇರುವುವು. ಇವು ಜಾಗ್ರತವಾಗ ಬೇಕಾದರೆ ಭೌತಿಕ ಸನ್ನಿವೇಶವು ಇಂದ್ರಿಯಗಳ ಮೂಲಕ ಅವನ್ನು ಎಚ್ಚರಿಸಬೇಕು. ಆಗ ಸಹಜವಾದ ವಾಸನಾನುಭವದ ಪರಿಜ್ಞಾನದಿಂದ ರಸಾನುಭವವಾಗುವುದು. ಇದು ಪ್ರತಿಯೊಂದು ರಸನಿಷ್ಪತ್ತಿಯಲ್ಲಿ ನಡೆವ ಪ್ರಕ್ರಿಯೆ. ಇದನ್ನು ಇನ್ನೂ ಬಿಚ್ಚಿ ಹೇಳಲು ಹವಣಿಸೋಣ. ಮಾನವನ ಆತ್ಮವು ಸನಾತನವಾದುದು. ಅದರ ವಿಕಾಸವು ಚಿರಕಾಲದಿಂದ ನಡೆದುದು. ಅದರ ಅನುಭವವು ಅನಂತವಾದುದು. ಜನ್ನನು ಹೇಳಿದಂತೆ "ಬಂದ ನೆಲನುಂಡಮರ್ದು ಕಂಡವಿಚಾರಂ" ಎಂಬ ಸೂತ್ರ ವನ್ನು ಅನುಸರಿಸಿದುದು. ಬಂದ ಭವಾವಳಿಗಳಿಂದ, ಆದ ವಿಕಾಸಗಳಿಂದ ಅದಕ್ಕೆ ಕೆಲವು ಶಾಶ್ವತವಾದ ವಾಸನೆಗಳುಂಟಾಗುವುವು, ಉಂಟಾಗಿವೆ. ಇವನ್ನೆ ಮನ ಶ್ಶಾಸ್ತ್ರಜ್ಞರು ಸಹಜವಾಸನೆ (Instincts) ಎನ್ನುವರು. ತಾತ್ತ್ವಿಕವಾಗಿ ವಿಚಾರಿಸಿ ದರೂ ಈ ಸಹಜವಾಸನೆಯ ಲಕ್ಷಣವನ್ನು ಹೀಗೆಯೆ ಹೇಳಬೇಕಾಗುವುದು. ಆದಿ ಕಾಮವು (Libido) ಜನ್ಮಕ್ಕೆ ಕಾರಣ. ಆದಿಕಾಮದ ನಿವೃತ್ತಿ ಮುಕ್ತಾವಸ್ಥೆಯೆಂದು ತತ್ತ್ವಜ್ಞರು ಹೇಳುವರು. ಮನಶ್ಶಾಸ್ತ್ರಜ್ಞರೂ ಕೂಡ ಆದಿಕಾಮವೆ ಸಹಜವಾಸನೆಗಳ ಮೂಲಾಧಾರವೆಂದೂ ಇದರ ಶಾಖೆಗಳಾಗಿ ಕಾಮ, ಕ್ರೋಧ. ಲೋಭ, ಮೋಹ, ಮದ ಮಾತ್ಸರ್ಯಗಳೆಂಬ ಷಡ್ರಾಗಗಳುಂಟಾಗುವುವೆಂದೂ ಹೇಳುವರು. ಪ್ರೇಯೋ ಜೀವಿ ಈ ಆರು ಮೂಲವಾಸನೆಗಳ ತೃಪ್ತಿಯಲ್ಲಿ ಲೌಕಿಕಾನಂದವನ್ನು ಪಡೆಯುವ ನೆಂದೂ ಈ ಮೂಲವಾಸನೆಗಳು ಕರ್ಮಾರ್ಜವವಾಗುವ ವರೆಗೂ ಆತ್ಮನ ಬೆನ್ನು ಬಿಡುವುದಿಲ್ಲೆಂದೂ ಮತ್ತು ಆದಿಕಾಮವು ನಾಶವಾಗುವದಿಲ್ಲವೆಂದೂ ತತ್ತ್ವದಲ್ಲಿ ಹೇಳುವುದುಂಟು. ಇದರ ಅರ್ಥವಿಷ್ಟೆ. ಶ್ರೇಯೋಭಿಲಾಷೆಯಿಲ್ಲದ ಜೀವಿಯ ಮನೋ ವೃತ್ತಿ ರಾಗರಂಜಕವೆಂದಂತಾಯಿತು. ಶ್ರೇಯೋಗಮನ ಜೀವಿ ಚಿತ್ತನಿರೋಧ, ರಾಗ ನಿರೋಧ, ಮತ್ತು ಆದಿಕಾಮನಿರೋಧದ ಕಡೆಗೆ ಯಮನಿಯಮ ಸಂಯಮಾದಿ ಗಳಿಂದ ಸಿದ್ಧಿ ಪಡೆಯುವನು. ಅದು ಪ್ರಸ್ತುತ ವಿಷಯವಲ್ಲ. ರಸನಿಷ್ಪತ್ತಿ ಪ್ರೇಯೋ ಮಾರ್ಗಕ್ಕೆ ಹೆಚ್ಚು ಸಂಬಂಧಪಟ್ಟುದು. ಅಂತೆಯೆ ಕೆಲವು ಲಾಕ್ಷಣಿಕರು ಶಾಂತರಸ ವನ್ನು ರಸಗಳಲ್ಲಿ ಎಣಿಸಿಲ್ಲ. ಮೇಲಿನ ಶಾಸ್ತ್ರೀಯ ಜಿಜ್ಞಾಸೆಗಳನ್ನು ಕೆಳಗಣ ಮಾತಿನಲ್ಲಿ ವಿಭಜಿಸಬಹುದು.—

ಮಾನವನು ಹಳಬನು. ಅವನ ಅನುಭವಗಳು ಅನಂತವಾದುವು. ಅವುಗಳ ಪರಿಣಾಮವು ಅವನ ಆತ್ಮದಮೇಲೆ ಶಾಶ್ವತವಾಗಿ ಆಗಿ ಅವು ಅವನಲ್ಲಿ ಸುಪ್ತವಾಗಿರುವುವು. ದೇಶ, ಕಾಲ ಮತ್ತು ಸನ್ನಿವೇಶಗಳ ಪರಿಸ್ಥಿತಿಗಳಿಂದ ಸುಪ್ತವಾದ ಈ ಪರಿಣಾಮುಗಳನ್ನು ಜಾಗ್ರತೆಗೊಳಿಸಿದಾಗ ಅವನ ಭಾವನಾತ್ಮಕ ನಾಡೀ ವ್ಯವಸ್ಥೆ ಪರಿಣಮಿತವಾಗಿ ರಕ್ತಸಂಚಲನೆಯಲ್ಲಿ ವೇಗವುಂಟಾಗಿ ದೇಹವಿನ್ಯಾಸದಲ್ಲಿ ಮಾರ್ಪಾಟವಾಗಿ ಚಿತ್ತವೃತ್ತಿ ತಾದಾತ್ಮ್ಯವನ್ನು ತಾಳುವುದು. ಇದನ್ನು ರಸಾನುಭವವೆಂದು ಹೇಳುವುದುಂಟು. ಈ ಒಂದು ಅರ್ಥವನ್ನೆ "ವಿಭಾವಾನುಭಾವ ವ್ಯಭಿಚಾರಿಭಾವ ಸಂಯೋಗಾದ್ರಸನಿಷ್ಪತ್ತಿಃ" ಎಂಬ ಸೂತ್ರವು ಸೂಚಿಸುವುದು. ಎಂದರೆ ಕಲೆ ರಸಸ್ಥಾನವೆಂದಮೇಲೆ ಅದು ಪಂಚೇಂದ್ರಿಯಗಳ ದ್ವಾರಾ ಮನುಷ್ಯನ ಸುಪ್ತಾನುಭವಗಳನ್ನು ಜಾಗೃತಿಗೊಳಿಸಿ ಪ್ರಾಚೀನ ಸಂಸ್ಕಾರವನ್ನು ಜ್ಞಾಪಕಕ್ಕೆ ತಂದು ತಾದಾತ್ಮ್ಯವನ್ನುಂಟುಮಾಡಬೇಕು.

ಕಲಾನಿರ್ಮಾಣದ ವಿಷಯವನ್ನಿಷ್ಟು ಯೋಚಿಸೋಣ. ಪಂಚೇಂದ್ರಿಯಗಳ ದ್ವಾರಾ ಆದ ರಸಾನುಭವಗಳನ್ನು ಅವುಗಳ ಮೂಲಕವೆ ಅಭಿವ್ಯಕ್ತಮಾಡುವ ಪ್ರಯತ್ನಕ್ಕೆ ಕಲಾನಿರ್ಮಾಣವೆಂದು ಹೆಸರು. ಆದರೆ ಪಂಚೇಂದ್ರಿಯಗಳ ಪೈಕಿ ಕಣ್ಣು, ಕಿವಿ ನಾಲಗೆಗಳಿಗೆ ಪ್ರಾಶಸ್ತ್ಯವು ಹೆಚ್ಚು. ಮೂಗು ಮತ್ತು ತ್ವಚಗಳು ಆನುಷಂಗಿಕವಾದುವುಗಳು. ಸಂಗೀತ, ಸಾಹಿತ್ಯ, ಶಿಲ್ಪ ಮತ್ತು ಚಿತ್ರಗಾರಿಕೆಯನ್ನು ಕಲೆಗಳೆಂದು ಹೇಳಲಾಗುವುದು. ಇವುಗಳೆಲ್ಲವೂ ಒಂದೊಂದು ಇಂದ್ರಿಯದ ಸೂಕ್ಷ್ಮ ಗ್ರಾಹಕ ಶಕ್ತಿಯಿಂದುಂಟಾದುವು. ಸಂಗೀತವು ಕರ್ಣೇಂದ್ರಿಯದ ಸೂಕ್ಷ್ಮಶಕ್ತಿಯನ್ನವಲಂಬಿಸಿ ತನ್ಮೂಲಕ ನಾದ, ಲಯ ಮತ್ತು ತಾಳಗಳ ಪರಿಜ್ಞಾನವು ಚಿತ್ತಕ್ಕೆ ವೇದ್ಯವಾಗುವುದು. ಕರ್ಣೇಂದ್ರಿಯದ ಶಕ್ತಿ ಜಾಗೃತವಾಗಿರುವ ಮನುಷ್ಯನೇ ಸಂಗೀತಗಾರನಾಗಬಲ್ಲನು. ನೇತ್ರೇಂದ್ರಿಯ ಮತ್ತು ಸ್ಪರ್ಶೇಂದ್ರಿಯದ ಸೂಕ್ಷ್ಮ ಶಕ್ತಿಯುಳ್ಳವನೆ ಉತ್ತಮ ಶಿಲ್ಪಿ ಅಥವಾ ಚಿತ್ರಗಾರನಾಗಬಲ್ಲನು. ಸಾಹಿತ್ಯವು ಒಂದು ಸಮಸ್ತವಾದ ಕಲೆ. ಅದರ ನಿರ್ಮಾಣಕ್ಕೆ ಪಂಚೇಂದ್ರಿಯಗಳ ಆವಶ್ಯಕತೆಯೂ ಅಷ್ಟೇ ಇದೆ. ಅಂತೆಯೆ ಅದನ್ನು ಕಲೆಗಳಲ್ಲಿ ಶ್ರೇಷ್ಠವಾದುದೆಂದು ಭಾವಿಸಲಾಗುವುದು. ಕಲಾಪುರುಷನು ತನ್ನ ಇಂದ್ರಿಯಗಳ ವಿಶಿಷ್ಟ ಸಾಮರ್ಥ್ಯಾನುಸಾರವಾಗಿ ಸೃಜಿಸುವನೆಂದಂತಾಯಿತು. ಬಾಹ್ಯ ಸನ್ನಿವೇಶಗಳು ಕಲಾಪುರುಷನ ಚಿತ್ತಸ್ಥವಾದ ಸುಪ್ತವಾಸನೆಗಳನ್ನು ಜಾಗೃತಿಗೊಳಿಸಿ ತಾದಾತ್ಮ್ಯವನ್ನುಂಟುಮಾಡಿದಾಗ ಆ ಪರಿಸ್ಥಿತಿಯನ್ನು ದೇಶಕಾಲಗಳ ಬಂಧನದಿಂದ ಅತೀತಗೊಳಿಸಲು, ವ್ಯಕ್ತಿಗತವಾದುದನ್ನು ವಿಶ್ವಗತಗೊಳಿಸಲು, ಹವಣಿಸುವನು. ಈ ಹವಣಿಕೆಯಲ್ಲಿ ಅವನು ಮಾಡುವುದೇನು?

ತನ್ನ ಕಲಾನುಭವಕ್ಕೆ ತನ್ನ ಪಂಚೇಂದ್ರಿಯಗಳು ಕಾರಣವಾದಂತೆ—ಅನ್ಯರ ಕಲಾನುಭವಕ್ಕೂ ಅವೇ ಕಾರಣಗಳೆಂದು ಅವನು ಬಲ್ಲನು. ಆದರೆ ದೇಶಕಾಲಬದ್ಧವಾದ ವಿಭಾವಗಳಿಂದ ಉದ್ಬುದ್ಧವಾದ ತನ್ನ ಕಲಾನುಭವವನ್ನು ಅವೇ ಪಂಚೇಂದ್ರಿಯಗಳ ಮೂಲಕ ಸರ್ವದೇಶ, ಸರ್ವಕಾಲ ಮತ್ತು ಸರ್ವಗತ ಮಾಡಬೇಕಾದರೆ ಅಮೂರ್ತವಾದ ತನ್ನ ಕಲಾನುಭವವನ್ನು ಮೂರ್ತಗೊಳಿಸಬೇಕು. ಮೂರ್ತಗೊಳಿಸಬೇಕಾದರೆ ಕಲಾನುಭವವನ್ನು ಭೌತಿಕ ಮಾಧ್ಯಮದಿಂದ ಪ್ರಕಟಿಸಬೇಕು. ಪಂಚಮಹಾಭೂತಗಳಲ್ಲಿಯೆ ಅದು ವ್ಯಕ್ತವಾಗಬೇಕು. ಹೀಗೆ ವ್ಯಕ್ತವಾದುದು ಕಲೆಯಲ್ಲ, ಕಲಾ ಪ್ರತೀಕ. ಶಿಲಾಪ್ರತಿಮೆಯಲ್ಲಿ ಪರಮಾತ್ಮನ ಸಾಕ್ಷಾತ್ಕಾರವನ್ನು ಮಾಡುವಂತೆ ಕಲಾಪ್ರತಿಮೆಯಲ್ಲಿ ಕಲಾನುಭವವನ್ನು ಸಾಕ್ಷಾತ್ಕರಿಸಬೇಕು. ಈ ಸಾಕ್ಷಾತ್ಕಾರಕ್ಕೆ ಈ ಭೌತಿಕ ಪ್ರತೀಕವು ನೆರವಾದಷ್ಟೂ ಕಲಾಪುರುಷನ ಕೌಶಲ್ಯವು ವ್ಯಕ್ತವಾಗುವುದು.

ಕಲಾನಿರ್ಮಾಣಕ್ಕೆ ಕಲಾಪುರುಷನು ಕಾರಣನಾದರೆ ಅವನ ಸುಪ್ತಾನುಭವಗಳ ಜಾಗೃತಿಗೆ ಜೀವನವು ಕಾರಣ. ಜೀವನದ ಸುಖ ದುಃಖ, ಸೌಂದರ್ಯ ವಿಕಾರ, ನೀತಿ-ಅನೀತಿ, ಶ್ಲೀಲ-ಅಶ್ಲೀಲಗಳು ಕಲಾಪುರುಷನಲ್ಲಿ ರಸಾನುಭವವನ್ನುಂಟುಮಾಡಿ ಪ್ರತಿಭೆಯ ಮುಖಾಂತರ ಮೂರ್ತವಾದ ಪ್ರತೀಕವನ್ನು ಪಡೆಯುವುವು. ಇದೇ ಕಲೆ. ಎಂದರೆ ಕಲೆಯಲ್ಲಿ ಕಲಾಪುರುಷ, ಅವನಮೇಲೆ ಪರಿಣಮಿಸುವ ಜೀವನ ಮತ್ತು ಇವೆರಡರ ಸಂಯೋಗದಿಂದುಂಟಾಗುವ ಕಲಾನುಭವ ಪ್ರತೀಕ ಈ ಮೂರು ವಿಷಯಗಳು ಕಲಾನಿರ್ಮಾಣದ ಮುಖ್ಯ ಸಾಧನಗಳೆಂದಂತಾಯಿತು.

ಕಲಾಪುರುಷನು ಜೀವಿ. ಅವನನ್ನು ಪ್ರಚೋದಿಸುತ್ತಿರುವುದು ಜೀವನ. ಈ ಪ್ರಚೋದನೆಯಿಂದ ಅವನು ಸೃಷ್ಟಿಸುತ್ತಿರುವ ಕಲೆ ಜೀವನದ ಒಂದು ಪ್ರತೀಕ ಎಂದ ಮೇಲೆ ಕಲೆಯೆ ಜೀವನ ಜೀವನವೆ ಕಲೆಯೆಂದಂತಾಯಿತು. ಏಕೆಂದರೆ ಜೀವನದಲ್ಲಿ ಕಲೆಯನ್ನು ಕಾಣುವವನು ಕಲಾವಿದನು. ಕಲೆಯಲ್ಲಿ ಜೀವನವನ್ನು ಕಾಣುವವರು ಸಹೃದಯರು. ಮೊದಲನೆಯ ಕ್ರಮದಲ್ಲಿ ಅಂತರ್ಜೀವನವು ಬಾಹ್ಯ ಸ್ವರೂಪವನ್ನು ತಾಳಿದರೆ ಎರಡನೆಯ ಕ್ರಮದಲ್ಲಿ ಬಾಹ್ಯಸ್ವರೂಪವು ಅಂತರ್ಜೀವನವನ್ನು ಸೃಷ್ಟಿಸುವುದು. ಆದುದರಿಂದ ಇವೆರಡರಲ್ಲಿಯೂ ಅಂತರ್ಗತವಾದುದು ಒಂದೇ ಒಂದು—ಅದು ಜೀವನ. ಜೀವನದಲ್ಲಿ ನೀತಿಯ ಸ್ಥಾನವೇನೆಂಬುದನ್ನು ನಾವು ನಿರ್ಣಯಿಸಿದರೆ ಕಲೆಯಲ್ಲಿ ಅದರ ಸ್ಥಾನವೇನೆಂಬುದು ನಿರ್ಣೀತವಾಗುವುದು. ಏಕೆಂದರೆ ಕಲೆ ಜೀವನದ ಕನ್ನಡಿ.

ನೀತಿಯೆಂದರೇನು ? ಮೂಕನು ಬೆಲ್ಲತಿಂದಂತೆ ನೀತಿಯ ನಿರ್ವಚನವಾಗುವುದು. ಯಾವುದು ನೀತಿ, ಯಾವುದು ಅನೀತಿ ಬಿಡಿಸಿ ಹೇಳುವುದು ಕಷ್ಟ. ಏಕೆಂದರೆ

ದೇಶ-ಕಾಲ-ಸನ್ನಿವೇಶಗಳ ಬಣ್ಣದಲ್ಲಿ ನೀತಿ ಅನೀತಿಯಾಗುವುದು; ಅನೀತಿ ನೀತಿಯಾಗುವುದು. ಅನೀತಿಯ ಕಗ್ಗತ್ತಲೆಯಲ್ಲಿಯೂ ನೀತಿಯ ಕಿರಣವೊಂದು ಹೊಳೆಯುವುದು. ಆದುದರಿಂದ ನೀತಿಯ ನಿರ್ದಿಷ್ಟ ಲಕ್ಷಣವನ್ನು ಹೇಳುವುದು ಕಷ್ಟ. ವ್ಯಕ್ತಿಯು ಸಮಾಜಾಂತರ್ಗತನು. ಭೂಮಿ ತನ್ನ ಸುತ್ತ ತಾನು ತಿರುಗಿ ಸೂರ್ಯನ ಸುತ್ತಲೂ ತಿರುಗುತ್ತಿರುವಂತೆ ವ್ಯಕ್ತಿ ತನ್ನ ಜೀವನವನ್ನು ತಾನು ಸಾಗಿಸಿ ಸಮಾಜ ಜೀವನವನ್ನು ತಿದ್ದುವನು, ಇಲ್ಲವೆ ಅದ್ದುವನು. ಇವರಿಬ್ಬರ ಸಂಬಂಧವು ಸಮವಾಯಸಂಬಂಧ. ಸಮಾಜ ಶಾಸ್ತ್ರದ ಪ್ರಕಾರ ನೀತಿಯ ಲಕ್ಷಣವನ್ನು ಹೇಳುವುದಾದರೆ ದೇಶಕಾಲಾನುಸಾರವಾಗಿ ಸಮಾಜ ಮತ್ತು ವ್ಯಕ್ತಿಯ ಜೀವನಕ್ಕೆ ಸಾಧಕವಾದ ಜೀವನಕ್ರಮವನ್ನು ನೀತಿಯೆಂತಲೂ ಇದಕ್ಕೆ ವಿರೋಧವಾದುದನ್ನು ಅನೀತಿಯೆಂತಲೂ ಹೇಳಬಹುದು. ವ್ಯಕ್ತಿಯು ಸಮಾಜಕ್ಕೆ ಬಾಧಕನಾಗದಂತೆ, ಸಮಾಜವು ವ್ಯಕ್ತಿಯ ಬೆಳವಣಿಗೆಗೆ ಬಾಧಕವಾಗದಂತೆ ನೋಡಿಕೊಳ್ಳಬೇಕೆಂದು ಮೇಧಾವಿಗಳು ಕೆಲವು ಸೂತ್ರಗಳನ್ನು ರಚಿಸಿ ಅವುಗಳನ್ನನುಸರಿಸಬೇಕೆಂದು ಅನುಶಾಸನಮಾಡಿದರು. ಈ ಶಾಸನಗಳು ನಿರಾಮಯ ಜೀವನದ ಮಾರ್ಗದರ್ಶಕಗಳು. ಇವುಗಳ ಉಲ್ಲಂಘನದಿಂದ ಸಮಾಜ ವ್ಯವಸ್ಥೆ ಮತ್ತು ವ್ಯಕ್ತಿಜೀವನದಲ್ಲಿ ಪತನ ಉಂಟಾಗುವುದು. ನಿಯಮಗಳು ಕಾಲಾನುಸಾರವಾಗಿ ಮಾರ್ಪಟ್ಟರೂ ಆ ಆ ಕಾಲಗಳಲ್ಲಿ ನಿಯಮಿಸಲಾದ ನೀತಿಯ ನಿಯಮಗಳನ್ನು ಅನುಸರಿಸುವುದು ಹದುಳವಾದ ಜೀವನಕ್ಕೆ ಆವಶ್ಯಕ; ಎಂದರೆ ನೀತಿಯು ಜೀವನಕ್ಕೆ ಪೋಷಕವೆಂದಂತಾಯಿತು.

ನೀತಿಯು ಜೀವನವನ್ನು ಸುಂದರಗೊಳಿಸಲಿದೆ. ರೂಪಸೌಂದರ್ಯ, ರಾಗಸೌಂದರ್ಯ, ಗುಣಸೌಂದರ್ಯ, ಆಚಾರಸೌಂದರ್ಯ, ಕ್ರಿಯಾಸೌಂದರ್ಯ, ಶೀಲಸೌಂದರ್ಯ ಮತ್ತು ಸ್ವಭಾವಸೌಂದರ್ಯಗಳು ವ್ಯಕ್ತಿ ಮತ್ತು ಸಮಾಜದ ಜೀವನವೆರಡಕ್ಕೂ ಸಾಧಕಗಳು. ಈ ಸೌಂದರ್ಯವನ್ನು ಸಾಧಿಸಲು ನೆರವಾಗುವುವು ನೀತಿಯ ನಿಯಮಗಳು. ವಿಕಾಸದಲ್ಲಿದ್ದ ಆತ್ಮನು ಇವುಗಳ ಸಾಧನೆಯಲ್ಲಿ ಎಡಹುವುದುಂಟು, ಮುಗ್ಗರಿಸಿ ಬೀಳುವುದುಂಟು, ಏಳುವುದೂ ಉಂಟು. ಏಳು ಬೀಳುಗಳಲ್ಲಿಯೂ ಒಂದು ಸೌಂದರ್ಯವಿದೆ. ಅದನ್ನು ನಾವು ವಿಕಾಸಸೌಂದರ್ಯವೆಂದು ಹೇಳಬಹುದು.

ಕಲಾವಿದನು ಈ ಸೌಂದರ್ಯಗಳ ಪೈಕಿ ಒಂದನ್ನು, ಕೆಲವನ್ನು, ಇಲ್ಲವೆ ಎಲ್ಲವನ್ನೂ ಚಿತ್ರಿಸುವನು. ಸಹೃದಯರು ಈ ಸೌಂದರ್ಯವನ್ನು ಅನುಭವಿಸಿ ಆನಂದಿಸುವರು. ಆದರೆ ಈ ಸೌಂದರ್ಯಗಳು ನೀತಿಯ ಆಳವಾದ ತಳಹದಿಯ ಮೇಲೆ ನಿಂತಿವೆಯೆಂಬ ಅರಿವು ಅವರಿಗೆ ಜಾಗ್ರದವಸ್ಥೆಯಲ್ಲಿರದಿದ್ದರೂ ಅದು ಅವರಲ್ಲಿ ಸುಷುಮ್ನಾಗತವಾಗಿ ಇದ್ದೇ ಇರುತ್ತದೆ.

ಜೀವನಕ್ಕೆ ಸಾಧಕವಾದುದು ಅಥವಾ ಬೇರೆಯ ಶಬ್ದಗಳಲ್ಲಿ ಹೇಳುವುದಾದರೆ ಜೀವನವನ್ನು ಸುಂದರಗೊಳಿಸುವುದು ನೀತಿ; ಅದಕ್ಕೆ ಬಾಧಕವಾದುದು ಅನೀತಿ ಯೆಂದು ತೀರ್ಮಾನವಾದಮೇಲೆ, ಕಲೆಗೂ ಜೀವನಕ್ಕೂ ತಾದಾತ್ಮ್ಯವಿದ್ದುದರಿಂದ, ನೀತಿಯು ಕಲಾಪೋಷಕವೂ ಅಹುದು. ಜೀವನದಲ್ಲಿ ನೀತಿ ಅನೀತಿಗಳೆರಡೂ ಇದ್ದ ಮೇಲೆ ಇದರ ಕೈಪಿಡಿಯಾದ ಕಲೆಯಲ್ಲಿ ನೀತಿ ಅನೀತಿಗಳೆರಡೂ ಇರಬಾರದೆ ಎಂಬ ಪ್ರಶ್ನೆ ತಲೆಯೆತ್ತುವುದು. ಜೀವನದಲ್ಲಿ ಅನೀತಿಯು ನೀತಿಯನ್ನು ಮುಟ್ಟಲು ಒಂದು ಮೆಟ್ಟಲಾಗಿದೆ. ಒಂದು ಸಲ ಇಲ್ಲವೆ ಹಲವು ಸಲ ಎಡಹಿ ಮುಗ್ಗರಿಸಿದರೂ ಗುರಿಯು ಶಿಖರವನ್ನು ಮುಟ್ಟುವುದಾಗಿರುತ್ತದೆ. ಇಂದ್ರಿಯಗ್ರಸ್ತವಾದ ಆತ್ಮವು ಸ್ವಾರ್ಥ ಸಾಧನೆಯ ಹಂಬಲಲ್ಲಿ ಆತ್ಮಘಾತುಕವಾದ ಕೆಲಸವನ್ನೂ, ಸಮಾಜದ್ರೋಹದ ಕೆಲಸ ವನ್ನೂ ಮಾಡಬಹುದು. ಆದರೆ ಅಂತರಾತ್ಮನಲ್ಲಿ ಮತ್ತು ಸಮಾಜದೃಷ್ಟಿಯಲ್ಲಿ ಆ ಕೆಲಸದ ಬೆಲೆ ಏನು? ಈ ಎರಡೂ ಆ ಕಾರ್ಯವನ್ನು ಹಳಿಯುತ್ತಿದ್ದರೆ ಜೀವನದಲ್ಲಿ ಆ ಕಾರ್ಯಕ್ಕೆ ಪ್ರಾಧಾನ್ಯವಿಲ್ಲವೆಂದಂತಾಯಿತು. ಜೀವನದಲ್ಲಿಲ್ಲದ ಮೇಲೆ ಕಲೆ ಯಲ್ಲಿಯೂ ಇಲ್ಲವೆಂದಂತಾಯಿತು. ಆತ್ಮನ ಉನ್ನತಾವಸ್ಥೆ ಕಲಾಜನ್ಮಕ್ಕೆ ಕಾರಣ ವೆಂದು ಹೇಳಿದಲ್ಲಿ ಆತ್ಮನ ಪತನಕ್ಕೆ ಕಾರಣವಾದ ಅನೀತಿಯು ಕಲೆಯಲ್ಲಿ ಪ್ರಾಧಾನ್ಯ ವನ್ನು ಪಡೆವುದೆಂತು?

ಆತ್ಮೋನ್ನತಿಗೂ ಮತ್ತು ಸಮಾಜಾಭಿವೃದ್ಧಿಗೂ ಸಾಧಕವಾದುದನ್ನೇ ಶೀಲ ವೆಂದು ಹೇಳುವುದುಂಟು. ಪಂಚೇಂದ್ರಿಯಗಳ ಮೂಲಕ ಈ ಶೀಲಸಂಪಾದನೆಯನ್ನು ಮಾಡುವುದೆ ಜೀವನದ ಗುರಿ. ಈ ಗುರಿಯನ್ನೆ ತಾತ್ತ್ವಿಕರು ಸತ್ಯವೆಂದು ಹೇಳುವರು. ಆದುದರಿಂದಲೆ ಒಂದೇ ವಸ್ತುವಿಗೆ ಎರಡು ಭಿನ್ನನಾಮವಿದ್ದಂತಾಯಿತು. ಎಂದರೆ ಸತ್ಯವೇ ಸೌಂದರ್ಯ; ಸೌಂದರ್ಯವೇ ಸತ್ಯ. ಸತ್ಯಸೌಂದರ್ಯಗಳ ಸಮನ್ವಯವೆ ಆನಂದ. ಆನಂದವೇ ಆತ್ಮದ ಲಕ್ಷಣ. ಆನಂದವನ್ನು ಸಂಪಾದಿಸುವುದೆ ಮತ್ತು ಅದನ್ನು ಶಾಶ್ವತಗೊಳಿಸುವುದೆ ಜೀವದ ಗುರಿ; ಜೀವನದ ಗುರಿ; ಜೀವನದ ಗುರಿ ಯಾದುದೇ ಕಲೆಯ ಗುರಿಯೂ ಆಗಿರಬೇಕು.

ಆತ್ಮ ಆನಂದಮಯ. ಆದರೆ ಕರ್ಮಾನುಲೇಪದಿಂದ ಆ ಆನಂದದ ಅರಿವ ತಪ್ಪಿದುದರಿಂದ ಒಂದಿಲ್ಲೊಂದು ರೂಪದಿಂದ ಒಂದಿಲ್ಲೊಂದು ಅಂಶದಲ್ಲಾದರೂ ಅದನ್ನು ಪಡೆಯಬೇಕೆಂಬುದೇ ಜೀವನದ ಕದನ. ಪಂಚೇಂದ್ರಿಯಗಳಿಗೆ, ವಾಸನೆಗಳಿಗೆ ವಶವರ್ತಿಯಾಗುವುದರಲ್ಲಿಯೆ ಜೀವನದ ಗುಟ್ಟು ಇದೆಯೆಂದು ಕೆಲವರು ಭಾವಿಸಿದರೆ ಅವುಗಳನ್ನು ದಾಟುವುದರಲ್ಲಿಯೆ ಜಯವಿದೆಯೆಂದು ಹಲವರು ಭಾವಿಸುವರು. ಇದೊಂದು ತಾತ್ತ್ವಿಕ ಪ್ರಶ್ನೆ. ಕಲೆಯಾದರೂ ಮಕ್ಕಳಿಗೆ ಮೋದಕವನ್ನು ಕೊಟ್ಟು

ಸಾತಕಲಿಸುವಂತೆ ಆತ್ಮದೊಳಗೆ ಹುದುಗಿದ್ದ ಆನಂದವನ್ನು ಪಂಚೇಂದ್ರಿಯಗಳ ಮೂಲಕವಾಗಿಯೆ ಮಧುರವಾಗಿ ಜಾಗೃತಿಗೊಳಿಸುವುದು. ಕಲೆಯ ಅಂತಿಮ ಗುರಿ ಶುದ್ಧ ಆನಂದ; ಶುದ್ಧ ಆನಂದಕ್ಕೆ ನೀತಿಯೇ ತಳಹದಿ.

ಮೇಲಿನ ಅಭಿಪ್ರಾಯಗಳಿಗೆ ಕಲಾಕೃತಿಗಳು ಸಾಕ್ಷಿಗಳಾಗಿವೆಯೇ ಎಂಬುದನ್ನು ಉದಾಹರಿಸಿ ನೋಡೋಣ :—

ರಸೋತ್ಪಾದಕವು ಕಲೆ. ರಸಗಳಿಗೆ ಸ್ಥಾಯಿಭಾವಗಳು ಹಿನ್ನೆಲೆ. ಈ ಸ್ಥಾಯಿಭಾವಗಳನ್ನು ಒಂದೊಂದಾಗಿ ವಿಭಜಿಸಿ ನೋಡಿದರೆ ರಸವತ್ಕೃತಿಯಲ್ಲಿ ನೀತಿ ಇದೆಯೇ ಇಲ್ಲವೇ ಎನ್ನುವುದು ಗೊತ್ತಾಗುವುದು. ಸಂಗೀತವು ಸೂಕ್ಷ್ಮ ವಿದ್ಯೆ. ಆದುದರಿಂದ ಅದನ್ನು ಬಿಟ್ಟು ಉಳಿದ ಲಲಿತಕಲೆಗಳನ್ನು ಪರೀಕ್ಷಿಸೋಣ.

ರತಿಯು ಮೂಲಸ್ಥಾಯಿಭಾವ. ಇದರಿಂದ ಉದಿಸುವುದು ಶೃಂಗಾರರಸ. ಈ ರತಿಯಲ್ಲಿ ಎರಡು ಭಾಗ ಮಾಡಬಹುದು. ಒಂದು ಪ್ರೀತಿ; ಇನ್ನೊಂದು ಪ್ರಣಯ. ಪ್ರಣಯದಲ್ಲಿ ದಾಂಪತ್ಯ ಭಾವವು, ಐಂದ್ರಿಯ ಅಂಶವು, ಹೆಚ್ಚಿರುವುದು. ಪ್ರೀತಿಯಲ್ಲಿ ಇವೆರಡೂ ಇಲ್ಲದಿರಬಹುದು. ಆದರೆ ಸಾಮಾನ್ಯವಾಗಿ ಶೃಂಗಾರವೆಂದೊಡನೆ ಪ್ರಣಯ ಪ್ರಧಾನವಾದ ಶೃಂಗಾರವೇ ನಮ್ಮ ಗಮನಕ್ಕೆ ಬರುವುದು. ಪ್ರಾಚೀನ ಕಾವ್ಯಗಳಲ್ಲೆಲ್ಲ ಇದರ ಆಟವೇ ಆಟವಾಗಿದೆ. ಪ್ರಣಯಾತೀತವಾದ ಪ್ರೀತಿ ಸಾಮಾನ್ಯವಾಗಿ ದುಸ್ತರವಾದುದು. ಅದರಿಂದ ರಸೋತ್ಪಾದನೆಯನ್ನು ಮಾಡುವುದು ಸ್ವಲ್ಪ ಕಷ್ಟದ ಕೆಲಸ. ಪ್ರಣಯರಹಿತವಾದ ಪ್ರೀತಿಯಲ್ಲಿ ರಸವನ್ನು ದ್ಬೋಧಿಸುವಾಗ ಪ್ರಾಯಃ ಬೇರೊಂದು ಸ್ಥಾಯಿಭಾವವು ಅದರ ನೆರವಿಗೆ ಬರಬೇಕಾದರೂ ಬರಬಹುದು. ಹಾಗೆ ಬಾರದೆ ಅದಕ್ಕೆ ಪುಷ್ಟಿ ಸಿಕ್ಕುವದಿಲ್ಲವೆಂಬ ಕಲ್ಪನೆಯಿದ್ದರೂ ಇರಬಹುದು. ಸಾಮಾನ್ಯವಾಗಿ ಜೀವನದಲ್ಲಿ ಸ್ತ್ರೀಪುರುಷರ ಸಂಬಂಧವು ಮೂಲತಃ ಲೈಂಗಿಕವೆಂದು ಆಧುನಿಕ ಮನಶ್ಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಇದರ ತಥ್ಯವೇನೇ ಇರಲಿ. ಸಾಮಾನ್ಯ ಜೀವನದಲ್ಲಿ ಮೊದಲನೆಯ ಪರಸ್ಪರ ಆಕರ್ಷಣವು ಪ್ರತ್ಯಕ್ಷವಾಗಿ ಲೈಂಗಿಕವಾಗದಿದ್ದರೂ ಅಪ್ರತ್ಯಕ್ಷವಾಗಿಯಾಗಲಿ ಸುಷುಮ್ನಾಗತವಾಗಿಯಾಗಲಿ ಅದು ಇದ್ದೇ ಇರುವುದು. ಆದುದರಿಂದ ಬಾಳಿನ ಗುಟ್ಟಿನಲ್ಲಿ ಪ್ರಣಯಕ್ಕೆ ಪ್ರಾಧಾನ್ಯವಿದ್ದರೆ ತಪ್ಪೇನೂ ಅಲ್ಲ. ಈ ಪ್ರಣಯಶೃಂಗಾರದಲ್ಲೂ ನೀತಿ ಇದೆಯೆ ಎನ್ನುವುದನ್ನು ನಾವು ನೋಡೋಣ. ಶೃಂಗಾರಪ್ರಧಾನವಾದ ಯಾವ ಕಾವ್ಯದಲ್ಲೂ ಪ್ರಣಯವನ್ನು ಅಸಮಂಜಸವಾಗಿ ವಿಘಾತಕವಾಗುವಂತೆ ವರ್ಣಿಸಲಿಲ್ಲ. ಕಲೆಯಲ್ಲಿ ನೀತಿಗೆ ಸ್ಥಾನವೆ ಇಲ್ಲವೆಂಬುದು ಸಿದ್ಧವಾಗಿದ್ದರೆ ಪ್ರಣಯವು ಧರ್ಮಬದ್ಧರಾದ, ವಿವಾಹಿತರಾದ ಅಥವಾ ವಿವಾಹಿತರಾಗಲಿರುವ ದಂಪತಿಗಳಲ್ಲಿ ತೋರಬೇಕಾದ ಆವಶ್ಯಕತೆಯಿರಲಿಲ್ಲ.

ಅಕ್ರಮವಾಗಿ ಹೇಗೆ ಬೇಕು ಹಾಗೆ, ಯಾರೊಡನೆ ಬೇಕು ಅವರೊಡನೆ, ಎಲ್ಲಿ ಬೇಕು ಅಲ್ಲಿ, ಪ್ರಣಯನಿರೂಪಣೆಯನ್ನು ಮಾಡಬಹುದಾಗಿತ್ತು. ಕೆಲವೆಡೆ ಹಾಗೆ ಆಗಿದೆ ಯೆಂದೂ ಹೇಳೋಣ. ಆದರೆ ಕಲಾದೃಷ್ಟಿಯಿಂದ ಅವುಗಳ ಬೆಲೆಯೇನು? ಲಾಕ್ಷಣಿಕರು ಇಂಥ ಪ್ರಣಯಗಳನ್ನು ರಸಾಭಾಸವೆಂದು ಹೇಳುವರು. ಅದರ ಅರ್ಥವೇನು? ಸಲ್ಲದುದು. ಸಂದರೆ ಅದು ಅಭಾಸವಲ್ಲವೆ? ಅಂತೆಯೆ ಕಲಾಕೃತಿಯ ನಾಯಕರತ್ನಗಳಲ್ಲಿ ಅಸಂಗತವಾದ ಮತ್ತು ನೀತಿರಹಿತವಾದ ಸಂಯೋಗವನ್ನು ನಿಷೇಧಿಸಲಾಗುವುದು. ಈ ನಿಷೇಧದ ತಳಹದಿ ಮಾನವಜೀವನದಲ್ಲಿಯೆ ಸ್ಫುಟವಾಗಿ ಕಾಣುವುದು. ನ್ಯಾಯವಾಗದ ಪ್ರಣಯಗಳು ಪ್ರಪಂಚದಲ್ಲಿ ಗೋಪ್ಯವಾಗಿ ಜರಗುವವು. ಗೋಪ್ಯಸ್ಫೋಟನದಿಂದ ಪ್ರಣಯಿಗಳಿಗೆ ನಾಚಿಕೆಯಾಗುವುದು. ತಲೆಯೆತ್ತದಂತಾಗುವುದು. ಇದರ ಅರ್ಥವೇನು? ಸ್ವಾರ್ಥವಾಸನೆಗೆ ಸಿಕ್ಕಿ ತಪ್ಪುಹಜ್ಜೆ ಇಡಬಹುದಾದರೂ ತಪ್ಪುಹಜ್ಜೆ ಒಪ್ಪು ಹಜ್ಜೆ ಆಗಲಾರದಲ್ಲವೆ? ಶೃಂಗಾರದ ದೃಷ್ಟಿಯಿಂದ ಅಶ್ಲೀಲವಾಗಿ ಹೇಳುವುದಾದರೆ ನೀತಿ ಇಲ್ಲದ ಕಲೆ ಸೂಳೆಯ ಸಂಸಾರ.

ರತಿಯ ಎರಡನೆಯ ಅಂಗವಾದ ಪ್ರೀತಿಯನ್ನು ವಿಮರ್ಶಿಸೋಣ. ಇದರಲ್ಲಿ ಅನೀತಿಯ ಹೊಳಪೆ ಕಾಣುವುದಿಲ್ಲ. ಲೈಂಗಿಕಭಾವನೆ ಅಳಿದ ಮೇಲೆ ಸ್ವಾರ್ಥದ ಕಲ್ಪನೆ ನೀಗುವುದು. ಸ್ವಾರ್ಥದ ಕಲ್ಪನೆ ನೀಗಿದ ಮೇಲೆ ಮಾಲಿನ್ಯವು ಮಾಯವಾಗುವುದು. ಪ್ರಕೃತಿಯ ಸುಂದರ ದೃಶ್ಯಗಳು, ಸಣ್ಣ ಮಕ್ಕಳ ಆಟಗಳು, ಗುರುಹಿರಿಯರ ಸಾನ್ನಿಧ್ಯಗಳು, ದೇವಸ್ಥಾನಗಳು ಈ ಎರಡನೆಯ ಅಂಗಕ್ಕೆ ವಿಭಾವಗಳು. ಅಲ್ಲಿ ಹುಟ್ಟುವ ರತಿ ಶುದ್ಧವಾದುದು, ನಿರ್ಮಲವಾದುದು.

ಎರಡನೆಯ ಹುಟ್ಟುಗುಣವಾದ ವಿಸ್ಮಯದಿಂದ ಅದ್ಭುತರಸವು ಹುಟ್ಟುವುದು. ಅನಿರೀಕ್ಷಿತ ಮತ್ತು ಅಕಲ್ಪಿತ ಸನ್ನಿವೇಶ, ಮತ್ತು ಅಜ್ಞಾನಗಳು ಇದಕ್ಕೆ ಕಾರಣ. ಚಿಕ್ಕಮಕ್ಕಳು ಹೊಸದಾಗಿ ಆನೆಯೊಂದನ್ನು ನೋಡಿದಾಗ, ಹಳ್ಳಿಗನು ಉಗಿಬಂಡಿಯನ್ನೋ, ವಿಮಾನವನ್ನೋ ನೋಡಿದಾಗ ಅಥವಾ ಕಾಲಪುರುಷನ ಕಾರ್ಯಸ್ಥಾನಗಳಿಂದ ಅದ್ಭುತ ಪರಿಸ್ಥಿತಿಗಳುಂಟಾದಾಗ ಅದ್ಭುತ ರಸವು ಉಂಟಾಗುವುದು. ಅದ್ಭುತ ರಸಪ್ರಧಾನವಾದ ಕಾವ್ಯಗಳಲ್ಲಿ ನೀತಿಗೆ ನೆಲೆಯಿಲ್ಲದಾಗ ಅದ್ಭುತ ರಸವು ವಸ್ತುವಿನ ಪ್ರತಿ ನಾಯಕನಲ್ಲಿ ಸೂಚಿತವಾಗಿ ಅವನ ಶಾಸ್ತಿಯಾಗುವುದು.

ಮೂರನೆಯ ಹುಟ್ಟುಗುಣವಾದ ಶೋಕದಿಂದ ಕರುಣರಸವು ಹುಟ್ಟುವುದು. ಶೋಕಕ್ಕೆ ಕಾರಣವು ಅನುಕಂಪ ಮತ್ತು ಸಹಾನುಭೂತಿ. "ಕ್ರೌಂಚದ್ವಂದ್ವ ವಿಯೋಗೋತ್ಥಃ ಶೋಕಃ ಶ್ಲೋಕತ್ವಮಾಗತಃ". ವಾಲ್ಮೀಕಿಗೆ ರಾಮಾಯಣವನ್ನು ಬರೆಯಲು ಕಾರಣವು ಕ್ರೌಂಚ ಮಿಥುನದ ವಿಯೋಗವೆಂದು ಹೇಳು

ವುದುಂಟು. ಎರಡು ಪಕ್ಷಿಗಳ ಅಗಲಿಕೆಯಿಂದ ವಾಲ್ಮೀಕಿಗೆ ಸಂತಾಪವಾದುದೇಕೆ? ಗಂಡುಹಕ್ಕಿಯನ್ನು ಕೊಂದ ಬೇಡನಿಗೆ ಶಾಪಕೊಟ್ಟುದೇಕೆ? ಇದರ ಮರ್ಮವೇನು? ಅದ್ವೈತ ತತ್ತ್ವದ ಪ್ರಕಾರ ಆತ್ಮವು ಒಂದು; ಬಹಿರಾಕಾರವಾಗಿ ಏಕವು ಅನೇಕ ವಾಗಿ ತೋರುವುದು, ಎಂದು ಹೇಳುವುದುಂಟು. ಅದೇನೇ ಇರಲಿ. ಆ ಏಕತೆಯ ಹೊಳವು ಇಲ್ಲಿ ಸ್ವಲ್ಪ ಕಾಣುವುದು. ಅನ್ಯರ ದುಃಖದಲ್ಲಿ ದುಃಖವನ್ನು ಅನುಭವಿಸುವ, ಅನ್ಯರ ಸುಖದಲ್ಲಿ ಸುಖವನ್ನು ಹೊಂದುವ ಸಹಜಗುಣವು ಮಾನವನಿಗೆ ನಿಸರ್ಗದತ್ತ ವಾದುದು. ಆದುದರಿಂದ ಹೆಣ್ಣು ಪಕ್ಷಿಯ ದುಃಖವು ವಾಲ್ಮೀಕಿಯ ಹೃದಯದಲ್ಲಿ ಪ್ರತಿಬಿಂಬಿತವಾಯಿತು; ಹೊರಹೊಮ್ಮಿತು. ಋಷಿಗೆ ಬೇಡನ ಮೇಲೆ ಕೋಪವೇಕೆ ಬಂದಿತು? ಪಕ್ಷಿಯಲ್ಲಿ ಅನುಕಂಪವೇಕೆ ಉಂಟಾಯಿತು? ಇದರ ಉತ್ತರವು ಕಲೆಯಲ್ಲಿ ನೀತಿ ಇದೆ ಎಂದಲ್ಲವೆ? ನೀತಿ ವಿರಹಿತರಲ್ಲಿ ಅನುಕಂಪ ಹುಟ್ಟದು. ಅನುಕಂಪ ಹುಟ್ಟದವಿನಾ ಶೋಕವು ಉದ್ಬುದ್ಧವಾಗದು. ಶೋಕವು ಉದ್ಬುದ್ಧವಾಗದವಿನಾ ಕರುಣರಸದ ನಿಷ್ಪತ್ತಿಯಾಗದು. ಕರುಣರಸ ಪ್ರಾಧಾನ್ಯವುಳ್ಳ ಯಾವ ಕಾವ್ಯವನ್ನೇ ಓದಲಿ ಅದರಲ್ಲಿ ನಾವು ನೋಡುವುದೇನು? ಪ್ರಕೃತಿಯಾಗಲಿ, ಪುರುಷನಾಗಲಿ ಸನ್ನಿವೇಶವಾಗಲಿ, ಪ್ರಕೃತಿಯನ್ನಾಗಲಿ, ಪುರುಷನನ್ನಾಗಲಿ ಸನ್ನಿವೇಶವನ್ನಾಗಲಿ ಅಕಾರಣವಾಗಿ ಬಾಧೆಪಡಿಸುತ್ತಿರುವುದು. ಈ ಶಿಕ್ಷೆಗೆ ಅಪರಾಧವಿದ್ದಿದ್ದರೆ ಕರುಣ ರಸಕ್ಕೆ ಎಡೆಯೆ ಇಲ್ಲ. ಅಪರಾಧವಿಲ್ಲದೆ ಶಿಕ್ಷೆಯಿರುವ ಸನ್ನಿವೇಶದಲ್ಲಿ ಅಥವಾ ಅಪರಾಧಿ ಯಾಗುವಂತೆ ಪರಿಸ್ಥಿತಿಗಳು ಬಲಾತ್ಕರಿಸುವಲ್ಲಿ ಕರುಣರಸಕ್ಕೆ ಪ್ರಚೋದನೆ ಸಿಕ್ಕು ವುದು. ಎಂದ ಮೇಲೆ ಇಲ್ಲಿಯೂ ನೀತಿಗೆ ನೆಲೆ ಇದೆ ಎಂದಂತಾಯಿತು.

ನಾಲ್ಕನೆಯ ಹುಟ್ಟುಗುಣವು ಕ್ರೋಧ. ಇದರಿಂದ ಹುಟ್ಟುವುದು ರೌದ್ರರಸ. ಕ್ರೋಧವು ಅರ್ಥ ಅನರ್ಥವೆರಡಕ್ಕೆ ಕಾರಣ. ಕಲಾಕೃತಿಯಲ್ಲಿ ಅನರ್ಥಕಾರಕ ಕ್ರೋಧವನ್ನು ವ್ಯಕ್ತಪಡಿಸಿದರೂ ಅದರ ಹಿನ್ನಡೆಯಲ್ಲಿ ನೀತಿಯೆ ಅವಿತುಕೊಂಡಿರುತ್ತದೆ. ಆ ಕಲಾಕೃತಿಯ ಪರಾಕಾಷ್ಠತೆ ಅನರ್ಥಕಾರಕ ಕ್ರೋಧದ ಪತನದಲ್ಲಿಯೆ ಇರುತ್ತದೆ. ಇದಕ್ಕೆ 'ಶ್ರೀ' ಅವರ 'ಅಶ್ವತ್ಥಾಮನ್' ಉದಾಹರಣೆ. ಕೆರಳಿದ ಅಶ್ವತ್ಥಾಮನಿಗೆ ಮರಣವೆ ಗತಿ. ಆದರೆ ಕೆರಳಿದ ಭೀಮನಿಗೆ ಪಟ್ಟವನ್ನು ಕಟ್ಟುವರು. ಇವೆರಡರಲ್ಲಿ ತಾರತಮ್ಯವೇನು? ನ್ಯಾಯಪರವಾದ ಕ್ರೋಧಕ್ಕೆ ಜಯವುಂಟು. ಅನ್ಯಾಯ ಪರವಾದ ಕ್ರೋಧಕ್ಕೆ ಸೋಲು.

ಐದನೆಯ ಸ್ಥಾಯಿಭಾವವು ಉತ್ಸಾಹ. ಇದರಿಂದ ಹುಟ್ಟುವುದು ವೀರರಸ. ಅನುಚಿತೋತ್ಸಾಹವು ಹಾಸ್ಯದಲ್ಲಿ ಪರಿವರ್ತಿಸುವುದು. ಅಕ್ರಮೋತ್ಸಾಹವು ಸೋಲಿ ನಲ್ಲಿ. ಶೀಲರಕ್ಷಣೆ ಶೀಲಪೋಷಣೆ ಮತ್ತು ಶೀಲಪಾಲನೆಗಳಲ್ಲಿ ತೋರಿದ ಉತ್ಸಾಹ

ದಿಂದ ವೀರರಸವು ಉದ್ಬುದ್ಧವಾಗುವುದು. ಶೀಲಚ್ಯುತಿ ಮತ್ತು ಶೀಲನಾಶದಲ್ಲಿ ತೋರಿಬರುವ ಶೌರ್ಯದಲ್ಲಿ ದುರಂತತೆ ಇದ್ದು ಅದರಲ್ಲಿ ಅನುಕಂಪವು ಬೆರೆಯುವುದು. ಅಲ್ಲದೆ ಪ್ರಕೃತಿ ಇಂಥ ಅನ್ಯಾಯಪರವಾದ ಉತ್ಸಾಹಕ್ಕೆ ಸಂಪೂರ್ಣ ಯಶಸ್ಸನ್ನು ಕೊಡುವುದಿಲ್ಲ. ಸತ್ಯವೇ ಜಯವೆಂಬುದು ಸರ್ವತ್ರ ಸಿದ್ಧವಾದುದು. 'ಅಭಿಮಾನ ಧನಂ ಸುಯೋಧನಂ', ಕರ್ಣ, ದ್ರೋಣ, ಭೀಷ್ಮ, ಅಶ್ವತ್ಥಾಮ ಮತ್ತು ಶಲ್ಯ ಮುಂತಾದವರು ಮಹಾಭಾರತದ ವೀರವ್ಯಕ್ತಿಗಳು. ಅವರ ಚರಿತ್ರೆ ವೀರ ರಸೋತ್ಪಾದಕ. ಆದರೆ ಈ ರಸದ ಅವಸಾನವು ಎಲ್ಲಿ? ಅವರ ಪತನದಲ್ಲಿ. ಅವರ ಮರಣದಲ್ಲಿ. ಸತ್ಯದ ಸೋಲು ಗೆಲುವೇ ಸರಿ. ಸುಳ್ಳಿನ ಗೆಲವು ಸೋಲೇ ಸರಿ. ಈ ಸೂತ್ರವು ಎಲ್ಲೆಲ್ಲೂ ವ್ಯಾಪಿಸಿದೆ. ಪ್ರಪಂಚ ಸಾಹಿತ್ಯದ ಯಾವ ವೀರಭಾಗವನ್ನು ನೋಡಿದರೂ ಅಲ್ಲಿ ನೀತಿಯ ತಳಹದಿ ದೃಢವಾಗಿಯೆ ಇರುತ್ತದೆ. ಸೀತೆಗಾಗಿ ಜೀವವನ್ನು ಕೊಟ್ಟ ರಾವಣನಿಗಿಂತ ಅದೇ ಸೀತೆಯನ್ನು ಕಾಪಾಡಲು ಜೀವವನ್ನು ಕೊಟ್ಟ ಜಟಾಯುಗೆ ಜಯವಿದೆ. ಇದಕ್ಕೆ ಕಾರಣವೇನು?

ಹಾಸ್ಯರಸದ ಸ್ಥಾಯಿಭಾವವು ಹಾಸ. ಇದನ್ನು ನಾವು ವಿಭಜಿಸಿದರೆ ಜೀವನ ದಲ್ಲಿ ನೀತಿಯ ನೆಲೆಯೇನಿದೆ ಎಂಬುದು ಸ್ವಚ್ಛವಾಗಿ ಕಂಡುಬರುವುದು. ನಗುವಿನ ಗುಟ್ಟನ್ನು ತಿಳಿಯಬೇಕು. ನಗುವಿನ ಬುಗ್ಗೆ ಇರುವುದೆಲ್ಲಿ? ನಗು ನೆಲೆಯೊಡೆವುದೆಲ್ಲಿ? ಈ ಅಂಶವನ್ನು ನಾವು ವಿಭಜಿಸಿದರೆ ನಮ್ಮ ಸಿದ್ಧಾಂತಕ್ಕೆ ಮತ್ತಷ್ಟು ಪೋಷಣೆ ಸಿಕ್ಕುವುದು. ಪ್ರಕೃತಿ ವಿರುದ್ಧವಾದ ವರ್ತನೆ ಹಾಸಕ್ಕೆ ಕಾರಣ. ನೀತಿಯೆಂದರೆ ಪ್ರಕೃತಿಗೆ ಸಂವಾದಿಯಾದುದು. ಪ್ರಕೃತಿವಿರುದ್ಧ ವರ್ತನೆಯೆಂದರೆ ಅನುಚಿತವಾದುದು. ಅನೌಚಿತ್ಯವೆ ಹಾಸ್ಯಕ್ಕೆ ಮಾತೃಕೆ. ಇದಕ್ಕೆ ಒಂದು ಸಣ್ಣ ಉದಾಹರಣೆ ಯನ್ನು ಕೊಡಬಹುದು. ಅಂಗಿಯ ಗುಂಡಿಯನ್ನು ಕೆಳಗೆ ಮೇಲೆ ಹಾಕಿದಾಗ, ಟೊಪ್ಪಿಗೆಯನ್ನು ಅರುಗುಮುರುಗು ಇಟ್ಟಾಗ, ತಲೆಗೂದಲನ್ನು ಮುಖದ ಮೇಲೆ ಕೆದರಿದಾಗ, ಜನರು ನಗುವರು. ಇದರ ಅರ್ಥವೇನೆಂದರೆ, ಈ ವರ್ತನೆ ಅನಿರೀಕ್ಷಿತ ಮತ್ತು ಅನುಚಿತವಾದುದರಿಂದ ಅವರಿಗೆ ನಗೆ ಬಂದಿತೆಂದು. ಇದು ತಿಳಿ ಹಾಸ್ಯದ ಸ್ವರೂಪವಾದರೆ ಆಳವಾದ ಹಾಸ್ಯದ ಜಟಿಲತೆ ಇನ್ನೂ ವಿಚಿತ್ರವಾಗಿದೆ. ಆ ಹಾಸ್ಯ ದಲ್ಲಿ ನೀತಿಯ ಕಾವು ಗೂಢವಾಗಿದೆ. ಉಷ್ಣಮಾಪಕಯಂತ್ರಕ್ಕೆ ಅದು ನಿಲುಕದಿದ್ದರೂ ಅನುಭವಿಸುವವನಿಗೆ ಅದರ ದಾಹವು ಗೊತ್ತಾಗುವುದು. ನಾವು ಎಷ್ಟೋ ಸಲ ಮನೆಯಲ್ಲಿದ್ದು ನಾಡಹಬ್ಬದ ವರ್ಗಣಿ ಕೇಳಬಂದವರಿಗೆ, ಪರಿಷತ್ತಿನ ಶುಲ್ಕವನ್ನು ಕೇಳಬಂದವರಿಗೆ ಮನೆಯಲ್ಲಿ ಇಲ್ಲವೆಂದು ಹೇಳಿಕಳಿಸುವೆವು. ಬಂದವರು ನಮಗಿಂತ ಬುದ್ಧಿವಂತರಿದ್ದು ಒಳಕ್ಕೆ ನುಗ್ಗಿದರೆನ್ನೋಣ. ಈ ಪರಿಸ್ಥಿತಿಯನ್ನು ರಂಗದಮೇಲೆ

ತೋರಿದರೆ ಪಾರಿಷದರ ಹಾಸ್ಯಕ್ಕೆ ಮಿತಿ ಇದೆಯೆ? ಅವರ ನಗೆಯ ಅರ್ಥವೇನು? ಇಲ್ಲಿ ನೀತಿ ಇದೆಯೆ ಇಲ್ಲವೆ? ನಗುವುದು ನೀತಿಯ ರಕ್ಷಣೆಗಾಗಿಯೊ ಅಥವಾ ಅನೀತಿಯ ಪಾಲನೆಗಾಗಿಯೊ? ಮಹಾಭಾರತದ ಉತ್ತರಕುಮಾರನ ಪಾತ್ರವನ್ನು ತೆಗೆದುಕೊಳ್ಳೋಣ. ಕುಮಾರವ್ಯಾಸನ ಉತ್ತರಕುಮಾರನು ಓದುಗರಿಗೆ ಚಕ್ಕಳಗುಳಿ ಯನ್ನು ಮಾಡುವನು. ಈ ಚಕ್ಕಳಗುಳಿಯ ಆಳವೆಲ್ಲಿದೆ? ಅರಸನ ಮಗನಾಗಿ, ಕ್ಷತ್ರಿಯ ವೀರನಾಗಿ ಗಂಡೆದೆಯಿಲ್ಲವೆಂಬ ಅನುಚಿತ ಪ್ರಸಂಗದಲ್ಲಲ್ಲವೆ? ಆಧುನಿಕ ಮನಶ್ಶಾಸ್ತ್ರಜ್ಞರ ಅಭಿಪ್ರಾಯದಂತೆ ನಗೆಯ ಕಾರಣವೇನೆಂದರೆ ಒಂದು ನಿರೀಕ್ಷಿತ ಸನ್ನಿವೇಶಕ್ಕಾಗಿ ನಮ್ಮ ಉತ್ಸಾಹವೆಲ್ಲ ಏಕಮುಖವಾದಾಗ ನಿರೀಕ್ಷಣೆ ತಪ್ಪಿ ವಿಪರೀತಾವಸ್ಥೆ ಒದಗಿದರೆ, ಏಕತ್ರವಾದ ಉತ್ಸಾಹವು ಬುಗ್ಗೆಯಾಗಿ ಚಿಮ್ಮುವುದು. ಅದೇ ನಗೆ. ಎಂದರೆ ಅಳುವ ಬದಲು ನಿರ್ವಾಹವಿಲ್ಲದೆ ನಗುವುದೆಂದಂತಾಯಿತು; ಮೇಲಿನ ಉತ್ತರಕುಮಾರನ ಉದಾಹರಣೆಯನ್ನೇ ತೆಗೆದುಕೊಳ್ಳೋಣ. ಉತ್ತರ ಕುಮಾರನು ಬ್ರಾಹ್ಮಣನ ಮಗನಾಗಿದ್ದು ಯುದ್ಧಕ್ಕೆ ಹೋಗುವುದಿಲ್ಲವೆಂದಿದ್ದರೆ ನಗುವ ಕಾರಣವಿದ್ದಿಲ್ಲ. ಕ್ಷತ್ರಿಯಕುಮಾರನಾಗಿಯೂ ಯುದ್ಧಕ್ಕೆ ಹೋಗದಿದ್ದುದು ನಿರೀಕ್ಷಣೆಯ ಆಭಾಸ. ಆಮೇಲೆ ಅಂತಃಪುರದಲ್ಲಿ ಸ್ತ್ರೀಯರ ಎದುರಿನಲ್ಲಿ ಜಂಭ ಹೇಳಿ ಆಮೇಲೆ ಯುದ್ಧರಂಗದಲ್ಲಿ ಮುಖ ತಿರುಗಿಸಿದುದು ನಿರೀಕ್ಷಣೆಯ ಎರಡನೆಯ ಆಭಾಸ. ಈ ಆಭಾಸಗಳಿಗೆ ಸಿದ್ಧವಿರದ ಏಕಮುಖ ಚೈತನ್ಯಕ್ಕೆ ಒಂದು ಅಭಿವ್ಯಕ್ತಿ ಬೇಕು. ಆ ಅಭಿವ್ಯಕ್ತಿ ನಗೆ. ಮನುಷ್ಯನು ನಡೆಯಬೇಕೆಂದು ನಿರೀಕ್ಷಿಸಲಾಗುವುದು. ಅಂತೆಯೆ ಎಡವಿದರೆ ನಗುವುದು. ಮನುಷ್ಯನು ನಿಜವನ್ನು ಹೇಳಬೇಕೆಂದು ನಿರೀಕ್ಷಿಸ ಲಾಗುವುದು. ಅಂತೆಯೆ ಸುಳ್ಳನ್ನು ಹೇಳಿದರೆ ನಗುವುದು. ಮನುಷ್ಯನು ಆತ್ಮಸ್ತುತಿ ಯನ್ನು ಮಾಡಬಾರದೆಂದು ನಿರೀಕ್ಷಿಸಲಾಗುವುದು. ಆದರೆ ತನ್ನ ಬೆನ್ನು ತಾನು ಚಪ್ಪರಿಸಿಕೊಂಡಾಗ ನಗೆಯ ಗರ್ಜನೆ ಕೇಳುವುದು. ನಗಿಸಿಕೊಳ್ಳುವವನಿಗೆ ನಾಚಿಕೆ ಬರಲೆಂಬುದೇ ನಗೆಯ ಧ್ಯೇಯ. ಇಲ್ಲಿ ನೀತಿ ಇದೆಯೆ? ಅನೀತಿ ಇದೆಯೆ? ವಾಸನೆ ಮತ್ತು ಲೋಭಗಳಿಗೆ ಸಿಕ್ಕಿ ಶೀಲಭಿನ್ನವಾದ ವಿಪರೀತ ಪ್ರವರ್ತನೆಗಳಲ್ಲಿ ತೊಡಗಿ ದಾಗ, ಓಜೆತಪ್ಪಿ ವರ್ತಿಸಿದಾಗ, ಅವುಗಳ ನೆನಪುಕೊಡಲು ನಗೆ ಸಾಧನವಾಗುವುದು. ನಮ್ಮನ್ನು ನೋಡಿ ಒಮ್ಮೆಲೆ ಯಾರಾದರೂ ನಕ್ಕರೆ ನಮ್ಮ ಉಡುಪನ್ನು ನಾವು ನೋಡಿಕೊಳ್ಳುವೆವು. ನಮ್ಮ ಮೈಯನ್ನು ನಾವು ನೋಡಿಕೊಳ್ಳುವೆವು. ಕನ್ನಡಿಯಲ್ಲಿ ಮುಖವನ್ನು ನೋಡಿಕೊಳ್ಳುವೆವು. ನಮ್ಮ ಈ ವರ್ತನೆಗೂ ಅವರ ನಗುವಿಗೂ ಯಾವ ಸಂಬಂಧವಿದೆ? ಅವರ ಪಾಡಿಗೆ ಅವರು ನಕ್ಕರೆ ನಾವು ಕನ್ನಡಿಯನ್ನು ನೋಡುವು ದೇಕೆ? ತಪ್ಪಿದಾಗ ತಿದ್ದುವುದಕ್ಕಲ್ಲವೆ? ನಗುವ ಗುರಿ ನಗಿಸಿಕೊಳ್ಳುವವನನ್ನು ಸರಿ

ಪಡಿಸಬೇಕೆಂದು ಪ್ರತ್ಯಕ್ಷವಾಗಿ ಗೋಚರಿಸದಿದ್ದರೂ ಪರಿಣಾಮದಲ್ಲಿ ಅದು ಅವನ ತಿದ್ದುಪಡೆಗೆ ಕಾರಣವಾದುದು. ಹಾಸ್ಯರಸದ ಉತ್ಪತ್ತಿಯು ಆಳದಲ್ಲಿ ; ಸತ್ಯವನ್ನು ಬೆಳಗುವುದಕ್ಕೆ.

ಭೀಭತ್ಸ ಭಯಾನಕ ರಸಗಳು ಜುಗುಪ್ಸೆ ಮತ್ತು ಭಯ ಈ ಎರಡು ಸ್ಥಾಯಿಭಾವಗಳಲ್ಲಿ ಹುಟ್ಟುವುವು. ಜುಗುಪ್ಸಾಭಾವನೆಯು, ಪ್ರಕೃತಿ, ಆವರಣ ಮತ್ತು ಸಮಾಜಗಳಿಂದ ಕಲ್ಪಿತವಾದ ಸದಭಿರುಚಿಗಳ ಪ್ರತೀಕಾರದ ಫಲ. ಈ ಸದಭಿರುಚಿಗಳ ನಿರ್ಣಯವು ಅವುಗಳ ವಿಧಾಯಕತೆಯಿಂದ ನಿರ್ಣಯಿಸಲಾಗುವುದೇ ಹೊರತು ವಿಘಾತುಕ ಸ್ವರೂಪದಲ್ಲೇನು ಅಲ್ಲ. ಕಕ್ಕಸದಲ್ಲಿ ಮೂಗು ಮುಚ್ಚಿದರೆ ಯಾರೂ ನಗುವುದಿಲ್ಲ. ಆದರೆ ಬಗೆಬಗೆಯ ಹೂಗಳಿಂದ ಮಗಮಗಿಸುವ ತೋಟದಲ್ಲಿ ಮೂಗು ಮುಚ್ಚಿದರೆ ಎಲ್ಲರೂ ನಗುವರು. ಭೀಭತ್ಸ ಭಾವನೆ ಅಸದ್ವಸ್ತು ಮಾಲಿನ್ಯ ಮತ್ತು ಅಶ್ಲೀಲತೆಯಲ್ಲಿ ಉದ್ಬುದ್ಧವಾಗಿ ಅವುಗಳನ್ನು ಎತ್ತಿಹಿಡಿವುದರಲ್ಲಲ್ಲದೆ ಅವುಗಳ ನಿರಸನದಲ್ಲಿ ಪರಿಣಮಿಸುವುದು.

ಭಯವೆಂಬುದೊಂದು ಪ್ರಮುಖವಾದ ಹುಟ್ಟುಗುಣ. ಆತ್ಮರಕ್ಷಣೆ ಮತ್ತು ಆತ್ಮಪೋಷಣೆಗೆ ಅಳಕುವುದು ಜೀವ. ಭಯದ ಭಾವನೆ ಬರುವುದೆಲ್ಲಿ? ಹುಲಿ ಅಡರಿದಾಗ, ಕಲಿ ಕತ್ತಿಮಸೆದು ನಿಂತಾಗ, ಜೀವಕ್ಕೆ ಬಾಧೆ ಬಂದಾಗ, ದೇಹಕ್ಕೆ ದಂಡನೆಯಾಗುವುದೆಂದಾಗ ಈ ಎಲ್ಲ ಸನ್ನಿವೇಶಗಳಲ್ಲಿ ಭಯದ ಮೂಲವನ್ನು ನಾವು ನೋಡಿದರೆ ಭಯಾನಕತೆ ಆತ್ಮನ ಆಳದಲ್ಲಿ ನೀತಿಯ ಬೀಜವನ್ನು ಬಿತ್ತಲು ಉದ್ದಿಷ್ಟವಾಗಿದೆಯೆಂದು ತೋರುವುದು. ದುಶ್ಯಾಸನನ ದುರಂತವಾದ ಮರಣದಿಂದ ಹಿಗ್ಗಿ ಕೊಬ್ಬಿದ ಭೀಮನ ದೃಶ್ಯದಿಂದ ಓದುಗರ ನಾಡಿಗಳು ನಡುಗುವ ಕಾರಣವೇನು? ಒಂದು ಅಂಶವನ್ನು ಮಾತ್ರ ನಾವು ಇಲ್ಲಿ ಮರೆಯಬಾರದು. ಪ್ರತಿಯೊಂದು ಜೀವಿಯ ಹುಟ್ಟುಗುಣಗಳೂ ಒಂದು. ಅವುಗಳಲ್ಲಿ ಪ್ರತಿಯೊಂದು ಉದ್ಬುದ್ಧವಾಗಬೇಕಾದರೆ ಪ್ರತಿಯೊಬ್ಬನಿಗೆ ಪ್ರತ್ಯಕ್ಷವಾಗಿ ಎಲ್ಲ ಅನುಭವಗಳಾಗಬೇಕೆಂಬುದು ಅನಗತ್ಯ. ನಾಡಿನಾಡಿಗಳಿಂದ, ನರನರಗಳಿಂದ ಕಲಸಲಾದ ಹೃದಯವು ಮಿಡಿಯಬೇಕಾದರೆ ಕತ್ತಲಲ್ಲಿ ಬೆಳಕು ಒಡೆಯಬೇಕಾದರೆ ಎಲ್ಲೋ ಯಾವುದೋ ಒಂದು ಗುಂಡಿ (ಸ್ವಿಚ್) ಯನ್ನು ಒತ್ತಿದರೆ ಸಾಕು, ಸರ್ವತ್ರ ಬೆಳಕು ಮೂಡುವುದು. ಇದು ಪ್ರಕೃತಿನಿಯಮ. ಅದು ಇರಲಿ, ಈಗ ಪ್ರಸ್ತುತವಾದುದೆಂದರೆ ಭೀಮನ ಆ ಘೋರದೃಶ್ಯದಿಂದ ಓದುಗನಿಗೆ ತನ್ನ ಪ್ರತ್ಯೇಕವಾದ ಅಸ್ತಿತ್ವವು ಮರೆದು ಕಾಳಗದ ತಳದಲ್ಲಿ ತಾನು ಇದ್ದಂತೆ ಭಾಸವಾಗಿ ತನ್ನ ಜೀವಕ್ಕೆ ಭೀಮನು ಮುಳುವಾದನಲ್ಲ ಎಂಬ ಭಯ. ಅಷ್ಟಾದರೇನೇ ಭಯಾನಕರಸದ ಉತ್ಪತ್ತಿ. ಇದರಲ್ಲಿ ನೀತಿಯೇನು? ಅನೀತಿಯೇನು? ಎಂದು

ಕೇಳಬಹುದು. ಸ್ವಲ್ಪ ಮುಂದೆ ನೋಡಿದರೆ ವಿಷಯವು ಗೊತ್ತಾಗುವುದು. ಭೀಕರ ಭಯಾನಕತೆಗಳು ಕಲೆಯಲ್ಲಿ ವರ್ಣಿತವಾಗುವಾಗ ಅವುಗಳ ಹಿನ್ನೆಲೆಯಲ್ಲಿ ನೀತಿ ಇದ್ದೇ ಇರುತ್ತದೆ. ಮಹಾ ಘೋರಶಕ್ತಿಯೆಂದು ಪ್ರಳಯಕೋಪದಿಂದ ಕಲೆಯಲ್ಲಿ ತಾಂಡವವಾಡುವುದನ್ನು ನಾವು ಯಾವಾಗ ನೋಡುವೆವು? ಕೊಳೆನುಂಗಿ, ತಪ್ಪು ತಿದ್ದಿ ಜೀವನವನ್ನು ತಿಳಿಗೊಳಿಸುವುದಕ್ಕಾಗಿಯೆ ಅದು ಉಪಯೋಗವಾಗಿರುತ್ತದೆ. ಅಥವಾ ಬರಸಿಡಿಲು ಗರ್ಜಿಸಿ ಮಳೆಗರೆವಂತೆ ಭಯಾನಕವು ಮುಂದೆ ಬರುವ ಕರುಣೆಗೆ ಪೋಷಕವಾಗಿರುತ್ತದೆ. ಇವೆರಡೂ ಸೇರಿ ರಾಗಸಂಸ್ಕಾರಕ್ಕೆ ನೆರವಾಗುತ್ತವೆ.

ಶಾಂತಿರಸವನ್ನು ಕುರಿತು ಬರೆಯಬೇಕಾದುದೇ ಇಲ್ಲ. ಅನೀತಿಯೆಲ್ಲಿ ಶಾಂತಿಯೆಲ್ಲಿ? ಶಾಂತಿಯೊಂದು ರಸವೇ ಎಂಬ ಪ್ರಶ್ನೆ ಇಲ್ಲಿ ತಲೆಯೆತ್ತುತ್ತದೆ. ಅದು ವಿಶಿಷ್ಟವಾದ ಬೇರೆ ಪ್ರಶ್ನೆಯಾದುದರಿಂದ ಅದರ ವಿವರಣೆ ಇಲ್ಲಿ ಬೇಡ. ಶಾಂತಿ ಶ್ರೇಯಕ್ಕೆ ಸಂಬಂಧಪಟ್ಟುದು. ಪ್ರೇಯೋನಿರಸನವು ಶಾಂತಿಸಾಧನೆಗೆ ಸಹಾಯಕ. ಆದುದರಿಂದ ಪ್ರೇಯೋಮುಖವಾದ ಸ್ಥಾಯಿಭಾವಗಳಿಂದ ಹುಟ್ಟುವ ರಸಗಳೊಡನೆ ಶ್ರೇಯೋಮುಖವಾದ ಶಾಂತಿಯನ್ನು ಬೆರೆಸಬೇಕೆ? ಬಾಹ್ಯಮುಖಕ್ಕೂ ಅಂತರ್ಮುಖಕ್ಕೂ ಅಜಗಜಾಂತರ. ಆದುದರಿಂದ ಪ್ರಾಚೀನ ಲಾಕ್ಷಣಿಕರಲ್ಲಿ ಕೆಲವರು ಶಾಂತಿಯನ್ನು ರಸದಲ್ಲಿ ಸೇರಿಸಿರಲಿಕ್ಕಿಲ್ಲ. ಸೇರಿಸಿದರೂ ಬಾಧಕವಿಲ್ಲ. ಅದರ ಗುರಿಯಂತೂ ಪ್ರಕಟವಾದ ನೀತಿಯಲ್ಲಿದೆ.

ಕಲೆಯೆಂಬುದು ಜನದ ಒಳಬಾಳಿನ ಆವಿಷ್ಕರಣ. ಒಳಬಾಳು ಹೊರಮೈಯಿಂದ ಆವರಿಸಿದೆ. ಹೊರಮೈಗೆ ಆದ ಸುಖದುಃಖಗಳು ಒಳಮನಸ್ಸಿಗೆ ತಟ್ಟುವುವು. ಅಥವಾ ಹೊರಬಾಳಿನಿಂದ ಆದ ಪ್ರಭಾವಗಳಿಗೆ ಒಳಆತ್ಮನ ಪ್ರತೀಕಾರವೇ ಕಲೆಯೆಂದು ಹೇಳಬಹುದು. ಬಾಹ್ಯಾಂತರ ವ್ಯಾಪ್ತವಾದ ಸೂತ್ರ ಒಂದೆ. ಅದೇ ವಿಕಾಸ. ವಿಕಾಸಪರವಾದ ಜೀವನದಲ್ಲಿ ಕಲೆಯೂ ವಿಕಾಸಪರವಾಗಿರಬೇಕು. ವಿಕಾಸಕ್ಕೆ ವಿಧಾಯಕತ್ವವೇ ಕಾರಣ. ವಿಧಾಯಕತ್ವಕ್ಕೆ ಧಾರಣವೇ ಶಕ್ತಿ. ಧಾರಣಕ್ಕೆ ಧರ್ಮವೇ ಮೂಲ. ಧರ್ಮವೇ ನೀತಿ. ಅಥವಾ ನೀತಿಯೆ ಧರ್ಮವಾದುದರಿಂದ ಕಲೆಗೂ ಜೀವನಕ್ಕೂ ಸಮವಾಯ ಸಂಬಂಧವಿದ್ದುದರಿಂದಲೂ, ಜೀವನಕ್ಕೂ ನೀತಿಗೂ ಅದೇ ಸಂಬಂಧವಿದ್ದ ಮೂಲಕ ಕಲೆಗೂ ನೀತಿಗೂ ಸಮವಾಯ ಸಂಬಂಧ ವಿದ್ದಂತಾಯಿತು. ಒಂದರಲ್ಲಿ ಅದು ಪ್ರಸ್ಫುಟವಾಗಿದ್ದರೆ ಇನ್ನೊಂದರಲ್ಲಿ ಅದು ಪ್ರಚ್ಛನ್ನವಾಗಿರಬಹುದು. ಇಷ್ಟೇ ಅಂತರ.

ಮೇಲಿನ ಅಭಿಪ್ರಾಯಗಳಿಗೆ ಮಹಾಪುರುಷರ ಕಲಾಕೃತಿಗಳು ಪೋಷಕವಾಗಿವೆಯೇ ಎಂಬುದನ್ನು ಸ್ವಲ್ಪ ಯೋಚಿಸೋಣ. ವಾಲ್ಮೀಕಿ, ಕಾಳಿದಾಸ, ಗಯಟೆ,

ಹೋಮರ್, ಷೇಕ್ಸ್‌ಪಿಯರ್ ಮುಂತಾದ ಮಹಾಕವಿಗಳ ಕೃತಿಗಳನ್ನು ಆಮೂಲಾಗ್ರ ವಾಗಿ ಪರಿಶೀಲಿಸಿದರೆ ಮುತ್ತಿನ ಸರದಲ್ಲಿ ದಾರವು ಒಳಗಿದ್ದು ಎಲ್ಲ ಮುತ್ತುಗಳನ್ನು ಏಕತ್ರಗೊಳಿಸಲು ಕಾರಣವಾಗಿದ್ದರೂ ತನ್ನ ಅಂಗವನ್ನು ವ್ಯಕ್ತಗೊಳಿಸದೆ ಮುತ್ತು ಗಳ ಹೊಳಪಿನಲ್ಲಿಯೆ ತನ್ನನ್ನು ಮರೆಮಾಚುವಂತೆ ಕಲೆಯೂ ಕೂಡ ನೀತಿಯು ಒಳ ದಾರದಿಂದ ಪವಣಿಸಲ್ಪಟ್ಟು ಕಾಂತಾಸಮ್ಮಿತಿಯಿಂದ ಪ್ರಜ್ಞೆಯ ಕಹಿನೆಸಹಿಗೆ ಭಾವದ ಸಿಹಿಕವಚವನ್ನು ತೊಡಿಸಿ ಆಸ್ವಾದನೀಯವನ್ನಾಗಿ ಮಾಡಿ ರಾಗಸಂಸ್ಕಾರ ಮಾಡು ವುದೆಂದು ತಿಳಿಯುವುದು. ಸುಸಂಸ್ಕೃತರಾಗವೆ ವಿರಾಗದ ಪ್ರತೀಕವಲ್ಲವೆ?

ಇಂದಿನ ವಾಕ್ಪಟಗಳಲ್ಲಿ ಪ್ರದರ್ಶಿತವಾಗುವ ವಸ್ತುಗಳನ್ನು ನಾವು ನೋಡಿದರೂ ಮಾನವಹೃದಯದ ಸದಂಶಗಳನ್ನು ಎತ್ತಿ ತೋರಿಸುವುದಕ್ಕಾಗಿಯೆ ಅವು ಹುಟ್ಟಿವೆ ಯೆಂದು ತಿಳಿಯುವುದು. ಸಣ್ಣಪುಟ್ಟ ಪ್ರಹಸನಗಳನ್ನು, ವಿಡಂಬನ ಕಾವ್ಯಗಳನ್ನು ಬರೆಯುವ ಉದ್ದೇಶವೇನು? ಬರೆ ಮೇಲೆ ತಗಲಿದರೂ ಒಳಗಿನ ಕುತ್ತಕ್ಕೆ ಅದು ಮದ್ದೆಂಬ ಭಾವನೆಯಿಂದಲ್ಲವೆ ಬರೆಯನ್ನು ಹಾಕುವುದು? ಒಂದೇ ಮಾತಿನಲ್ಲಿ ಹೇಳು ವುದಾದರೆ ಜೀವಕ್ಕೆ ಜೀವನದ ಆಶೆ ಸಹಜ; ಜೀವನಕ್ಕೆ ಬೆಳೆವ ಗುಣ ಸಹಜ; ಬೆಳೆವಣಿಗೆಗೆ ಶಕ್ತಿಯ ಆವಶ್ಯಕತೆ ಸಹಜ. ಶಕ್ತಿಗೆ ಸಾಮಂಜಸ್ಯವೇ ಸಹಜ; ಈ ಸಾಮಂಜಸ್ಯಕ್ಕೆ ನೀತಿಯೇ ಸಹಜ. ಜೀವದ ಮತ್ತು ಜೀವನದ ವಿಕಾಸವರ್ಣನೆಗೆ ಕಾರಣವಾದ ಕಲೆಗೂ ನೀತಿ ಸಹಜವೆಂದಂತಾಯಿತು.

'ಮಾನ್ವಿ'

---

# ಭರತಖಂಡದ ಪರ್ವತಗಳು

ಭರತಖಂಡದ ಪರ್ವತಗಳ, ಬೆಟ್ಟಗುಡ್ಡಗಳ, ಪರಿಚಯವು ನಮಗೆ ಪ್ರಾಥಮಿಕ ಶಾಲೆಗಳಲ್ಲೇ ಆಗುತ್ತದೆ. "ಕಲ್ಲುನೆಲದಲ್ಲಿರುವ ಎತ್ತರವಾದ ದಿಣ್ಣೆಯನ್ನು ಗುಡ್ಡ ಎಂಬುದಾಗಿ ಕರೆಯುತ್ತಾರೆ. ಗುಡ್ಡಕ್ಕಿಂತಲೂ ಎತ್ತರವಾಗಿ ಕಲ್ಲುಬಂಡೆಗಳಿಂದ ಕೂಡಿರುವಂಥ ನೆಲಕ್ಕೆ ಬೆಟ್ಟ ಎಂದು ಹೆಸರು. ಬೆಟ್ಟವು ಸಾಲುಸಾಲಾಗಿದ್ದು ಬಹಳ ಎತ್ತರವಾಗಿದ್ದರೆ ಪರ್ವತವೆಂದು ಹೆಸರು. . . ." ಎಂದು ಮುಂತಾಗಿ ನಮಗೋಸ್ಕರ ಬರೆದ ಸರಳ ಭೂವಿವರಣೆಗಳ ಅನೇಕ ಪುಟಗಳನ್ನು ಉರುಹಚ್ಚಿ ಉಪಾಧ್ಯಾಯರಿಗೆ ಒಪ್ಪಿಸುತ್ತೇವೆ. ಈಗಲೂ ಅಂದು ಕಲಿತುದರ ಅವಶೇಷ ನಮ್ಮಲ್ಲಿ ಉಳಿದು, ಪರ್ವತಗಳ ಬೆಟ್ಟಗುಡ್ಡಗಳ ಬಗ್ಗೆ ಅದೇ ದೃಷ್ಟಿ ಕಣ್ಮುಂದೆ ನಿಂತಿದೆ. ಗುಡ್ಡ, ಬೆಟ್ಟ, ಪರ್ವತ— ಹೀಗೆ ನಾವು ವಿಂಗಡಮಾಡುವಾಗ ನಮ್ಮ ಮುಂದಿರುವುದು ಮುಖ್ಯವಾಗಿ ಎತ್ತರದ ದೃಷ್ಟಿ; ನಮ್ಮ ವಿಭಜನೆ ಎತ್ತರದ ಪ್ರಕಾರ. ಗಾತ್ರದ ದೃಷ್ಟಿಯೂ ಇನ್ನೊಂದು ಎಂದು ಹೇಳಬಹುದು. ಆದರೆ ಈ ಸಾಮಾನ್ಯದೃಷ್ಟಿಯನ್ನು ವಿಶಾಲಗೊಳಿಸಿ, ಪರ್ವತಗಳಲ್ಲಿ ಕಾಣಬರುವ ವೈವಿಧ್ಯ ವೈಚಿತ್ರ್ಯಗಳನ್ನೂ ಅವುಗಳ ವಿವಿಧವಾದ ಹುಟ್ಟಿನ ರೀತಿಗಳನ್ನೂ ನಾವು ವೈಜ್ಞಾನಿಕ ರೀತಿಯಲ್ಲಿ ಪರಿಶೀಲಿಸಿ ನೋಡಬೇಕು. ಆಗ ಗಗನಚುಂಬಿಯಾದ ಹಿಮಾಲಯವೂ ನಮ್ಮೂರಿನ ಬೆಟ್ಟಗುಡ್ಡಗಳೂ ನಮ್ಮ ಕಣ್ಣಿಗೆ ಒಂದು ಹೊಸ ಅರ್ಥದಿಂದ ತುಂಬಿ ಕಾಣುವುವು.

ಭೂವೈಜ್ಞಾನಿಕನು ಪರ್ವತಗಳನ್ನು ಎತ್ತರದ ಅಥವಾ ಗಾತ್ರದ ಮೇರೆಗೆ ವಿಂಗಡಿಸುವುದಿಲ್ಲ. ಆತನು ಪರ್ವತಗಳನ್ನು ಅವುಗಳ ಹುಟ್ಟಿನ ಮೇರೆಗೆ ಹಲವು ಜಾತಿಗಳಾಗಿ ವಿಂಗಡಿಸುತ್ತಾನೆ. ನಮ್ಮ ಇಂಡಿಯಾ ದೇಶದಲ್ಲೂ ಆವನು ವಿಂಗಡಿಸಿರುವ ವಿವಿಧ ಜಾತಿಗಳಿಗೆ ಸೇರಿದ ಪರ್ವತಗಳ ಪ್ರತಿನಿಧಿಗಳು ಅನೇಕವಿವೆ. ಅವುಗಳನ್ನು ಈಗ ಪರಿಶೀಲಿಸೋಣ.

ಮೊದಲನೆಯ ಜಾತಿಗೆ ಸೇರುವ ಬೆಟ್ಟಗಳನ್ನು "ಸಂಗ್ರಹದಿಂದುಂಟಾಗುವ ಪರ್ವತಗಳು" (Mountains of Accumulation) ಎಂದು ಕರೆಯಬಹುದು. ಈ ಬಗೆಯ ಬೆಟ್ಟಗಳು ಅಷ್ಟು ಮುಖ್ಯವಲ್ಲ. ಮಣ್ಣು ಮರಳು ಅಥವಾ ಶಿಲೆಗಳು ಒಂದು ಕಡೆ ರಾಶಿಯಾಗಿ ಕುಪ್ಪೆ ಸೇರಿದರೆ ಸುತ್ತಲಿನ ಪ್ರದೇಶಕ್ಕಿಂತ ಎತ್ತರವಾದ ಭೂಭಾಗ ಉಂಟಾಗುತ್ತದೆ. ಹೀಗೆ ಮರಳು ಅಥವಾ ಕಲ್ಲಿನ ಸಂಗ್ರಹದಿಂದ ಬೆಟ್ಟ ಗುಡ್ಡಗಳು ನಿರ್ಮಾಣವಾಗುತ್ತವೆ. ನಮಗೆ ಚಿರಪರಿಚಿತವಾದ ಮರಳು ಗುಡ್ಡಗಳು

ಈ ರೀತಿಯಲ್ಲಿ ಉಂಟಾಗುವ ಬೆಟ್ಟಗುಡ್ಡಗಳಲ್ಲಿ ಮುಖ್ಯವಾದುವು. ಮರಳಿನ ಮೇಲೆ ಬಿರುಗಾಳಿ ಬೀಸುವಾಗ ಅದು ಮರಳನ್ನು ಹೊತ್ತು ದೂರಕ್ಕೆ ಕೊಂಡೊಯ್ಯುತ್ತದೆ: ನಮ್ಮ ಊರಿನ ರಸ್ತೆಯ ಧೂಳನ್ನು ಬೀಸುವ ಗಾಳಿ ಕೊಂಡೊಯ್ಯುವ ಹಾಗೆ. ಬಿರುಗಾಳಿ ಒಯ್ಯುತ್ತಿರುವ ಮರಳಿಗೆ ಯಾವುದಾದರೂ ಅಡಚಣೆ ಬಂದರೆ ಅದು ಮುಂದೆ ಸಾಗಲಾರದೆ ಬಿದ್ದು ಹೋಗುತ್ತದೆ. ಗಾಳಿ ಹೊತ್ತುತಂದ ಮರಳು ಕಾಲಾನು ಕಾಲಕ್ಕೆ ಒಂದೇ ಕಡೆ ರಾಶಿಯಾಗಿ ದಿಬ್ಬವಾಗುತ್ತದೆ. ಪ್ರತಿನಿಮಿಷವೂ ಹೆಚ್ಚು ಹೆಚ್ಚು ಮರಳು ರಾಶಿಗೂಡಿ, ಕಡೆಗೆ ಮರಳು ದಿಬ್ಬಗಳಾಗುತ್ತವೆ.



"ಸಂಗ್ರಾಹಕ ಪರ್ವತಗಳು ೧"

ಈ ಚಿತ್ರದಲ್ಲಿ ಮರಳು ದಿಬ್ಬಗಳು ಉಂಟಾಗುವ ಬಗೆಯನ್ನು ತೋರಿಸಿದೆ. ಎಡಗಡೆಯ ಬಾಣರೇಖೆಗಳು ಗಾಳಿಬೀಸುವ ದಿಕ್ಕನ್ನು ತೋರಿಸುತ್ತವೆ. ಗಾಳಿಬೀಸುವ ಕಡೆಗಿಂತ ಗಾಳಿಗೆದುರಾದ ಕಡೆ ಹೆಚ್ಚು ಇಳಿಜಾರಾಗಿರುವುದನ್ನು ಚಿತ್ರದಲ್ಲಿ ಕಾಣಬಹುದು.

ಸಾಧಾರಣವಾಗಿ ಮರಳು ದಿಬ್ಬಗಳು ಸಮುದ್ರತೀರದಲ್ಲಿ ಉಂಟಾಗುತ್ತವೆ. ಸಮುದ್ರದಿಂದ ಬೀಸುವ ಗಾಳಿಗಳು ತೀರದ ಮರಳಿನ ಮೇಲೆ ಬೀಸುವಾಗ, ಮರಳು ಒಳಪ್ರದೇಶಕ್ಕೆ ಒಯ್ಯಲ್ಪಡುತ್ತದೆ. ಕೂಡಲೆ ತಡೆಗಳು ಸಿಕ್ಕಿ ಬಿದ್ದುಹೋಗುತ್ತದೆ. ಹೀಗೆ, ಸಮುದ್ರತೀರದಲ್ಲಿ ಅನೇಕ ಕಡೆ ಇನ್ನೂರ ಐವತ್ತು ಅಡಿಗಳಷ್ಟು ಎತ್ತರದ ಮರಳು ದಿಬ್ಬಗಳು ಉಂಟಾಗಿವೆ. ರಾಮೇಶ್ವರದಲ್ಲಿ, ಸಮುದ್ರತೀರದ ಹತ್ತಿರ ಮರಳು ದಿಬ್ಬಗಳು ವಿಶೇಷವಾಗಿವೆ. ನದಿಗಳ ಇಕ್ಕೆಲದಲ್ಲೂ ಕೂಡ ಮರಳು ಶೇಖರವಾಗುವ ಕಡೆ, ದಿಬ್ಬಗಳು ಉಂಟಾಗುತ್ತವೆ. ತಲಕಾಡಿನ ಮರಳು ದಿಬ್ಬಗಳೇ ಇದಕ್ಕೆ ಉದಾಹರಣೆ.

ಮರುಭೂಮಿಗಳಲ್ಲೂ, ನಾವು ಮರಳು ದಿಬ್ಬಗಳನ್ನು ವಿಶೇಷವಾಗಿ ಕಾಣಬಹುದು. ಹೆಚ್ಚು ಮಳೆಯೇ ಆಗದೆ ಇರುವ ಪ್ರದೇಶಗಳಲ್ಲಿ ಈ ದಿಬ್ಬಗಳುಂಟಾಗುತ್ತವೆ. ಇಂಡಿಯಾದಲ್ಲಿರುವ ರಾಜಪುಟಾಣ ಮರುಭೂಮಿಯಲ್ಲಿ ಇಂತಹ ಮರಳು ದಿಬ್ಬಗಳು ವಿಶೇಷವಾಗಿವೆ.

"ಸಂಗ್ರಹ ಪರ್ವತಗಳು" ಎಂಬ ಶಿರೋನಾಮೆಯಲ್ಲಿ ಭೂವೈಜ್ಞಾನಿಕರು ಅಗ್ನಿಪರ್ವತಗಳನ್ನೂ ಸೇರಿಸುತ್ತಾರೆ. "ಅಗ್ನಿಪರ್ವತ" ಎಂಬ ಹೆಸರನ್ನು ಕೇಳಿದ

ಕೂಡಲೆ ನಮಗೆ ಹಬೆಯನ್ನೂ ಶಿಲಾರಸವನ್ನೂ ಕಾರುತ್ತಿರುವ "ಪರ್ವತದ" ದೃಶ್ಯ ಕಣ್ಣಿಗೆ ಬರುತ್ತದೆ. ಆದರೆ, ಅಗ್ನಿಪರ್ವತದ—ಇಡೀ ಬೆಟ್ಟದ—ನಿರ್ಮಾಣ ಕ್ರಮೇಣ, ಭೂಮಿಯ ಒಳಗಿನಿಂದ ಹೊರಕ್ಕೆ ಬಂದ ಶಿಲಾರಸದ ಸಂಗ್ರಹದಿಂದ ಉಂಟಾಗಿದೆ ಎಂಬುದು ಅನೇಕರಿಗೆ ಗೊತ್ತಿಲ್ಲ. ಮೊದಲು ಭೂಮಿಯಲ್ಲಿ ಒಂದು ದ್ವಾರವು ಏರ್ಪಟ್ಟು, ಅದರ ಮೂಲಕ ಹೊರಕ್ಕೆ ಬಂದ ಶಿಲಾರಸ, ಶಿಲೆಯ ಪುಡಿಗಳು, ಧೂಳು—ಎಲ್ಲವೂ ಅದರ ಸುತ್ತಲೂ ಶೇಖರವಾಗಿ ಕಡೆಗೆ ಪರ್ವತವಾಗಿ ಕಾಣುತ್ತದೆ. ಸುಪ್ರಸಿದ್ಧವಾದ ವೆಸುವಿಯಸ್ ಅಗ್ನಿಪರ್ವತವು ಸುಮಾರು ನಾಲ್ಕುಸಾವಿರ ಅಡಿ ಎತ್ತರವಿದೆ! ಶಿಲಾ ರಸದ ಸಂಗ್ರಹದಿಂದ ಉಂಟಾಗಿರುವ ಸಹಸ್ರಾರು ಅಡಿ ಎತ್ತರದ ಅಗ್ನಿಪರ್ವತಗಳು ಬರ್ಮಾ ದೇಶದಲ್ಲಿ ಅನೇಕವಿವೆ.



"ಸಂಗ್ರಾಹಕ ಪರ್ವತಗಳು ೨"

ಅಗ್ನಿಪರ್ವತದ ಸೀಳ್ನೋಟ. ಭೂಮಿಯಿಂದ ಹೊರಕ್ಕೆ ಬಂದ ಶಿಲಾರಸವು ಪದರಪದರವಾಗಿ ಸಂಗ್ರಹವಾಗಿರುವುದನ್ನು ಇಲ್ಲಿ ಕಾಣಬಹುದು. ಮಧ್ಯಭಾಗದಲ್ಲಿ ಶಿಲಾರಸವು ಆರಿ ಗಟ್ಟಿಯಾಗಿದೆ. ಶಿಲಾರಸವು ಎಡಬಲಗಳಲ್ಲಿ ಕವಲೊಡೆದಿರುವುದನ್ನೂ ಕಾಣಬಹುದು.

ಬೊಂಬಾಯಿ, ಗುಜರಾತ್, ಮಧ್ಯ ಇಂಡಿಯಾ ಪ್ರದೇಶಗಳಲ್ಲಿ ಒಂದು ಬಗೆಯ ಪರ್ವತಗಳು ಕಾಣಬರುತ್ತವೆ. ಅವುಗಳ ಎತ್ತರ ಸುಮಾರು ಮೂರು ನಾಲ್ಕು ಸಾವಿರ ಅಡಿ ಇರುತ್ತದೆ. ದೂರದಿಂದ ನೋಡುವುದಕ್ಕೆ ಮೆಟ್ಟಲು ಮೆಟ್ಟಲಾಗಿ ಕಾಣುತ್ತದೆ. ಬೊಂಬಾಯಿಂದ ಪೂನಾಕ್ಕೆ ಹೋಗಿರುವ ಪ್ರತಿಯೊಬ್ಬನಿಗೂ ಈ ಬೆಟ್ಟಗಳ ಸೊಬಗಿನ ಸುಮನೋಹರ ನೋಟ ಕಣ್ಣಿಗೆ ಬೀಳುತ್ತನೆ. ಬಹುದೂರ ಪದರ ಪದರ ವಾಗಿ ಜೋಡಣೆಯಾಗಿರುವ ಈ ಬೆಟ್ಟಗಳಲ್ಲಿ ಕೊರೆದಿರುವ ಸುರಂಗಗಳ ಮೂಲಕ ರೈಲು ಹಾದುಹೋಗುತ್ತದೆ. ಇಂತಹ ಪರ್ವತಗಳೂ ಶಿಲಾರಸದಿಂದಲೇ ಆದುವು. ಆದರೆ ಈ ಶಿಲಾರಸವು ಹೆಚ್ಚು ದ್ರವರೂಪದಲ್ಲಿರುವುದರಿಂದ ಸುತ್ತಲೂ ಹರಿದು

ಪ್ರಸ್ಥಭೂಮಿಯಾಗುತ್ತದೆ. ಅದೂ ಅಲ್ಲದೆ ಈ ಶಿಲಾರಸವು ಕೇವಲ ದ್ವಾರಗಳಿಂದ ಎಸೆಯಲ್ಪಡದೆ, ನೀಳವಾದ, ಅಗಲವಾದ, ಆಳವಾದ ಬಿರುಕುಗಳಿಂದ ಹೊರಹರಿಯುತ್ತದೆ. ಡಾ|| ಬೀರ್‌ಬಲ್ ಸಾನಿಯವರು, ಮದರಾಸಿನಲ್ಲಿ ನಡೆದ ಇಂಡಿಯನ್ ಸೈನ್ಸ್ ಕಾಂಗ್ರೆಸಿನ ಅಧ್ಯಕ್ಷಪೀಠದಿಂದ ದಖನ್ನಿನ ಶಿಲಾರಸ ಪ್ರಳಯವನ್ನು ಹೀಗೆಂದು ಬಣ್ಣಿಸಿದ್ದಾರೆ:—"ದಖನ್ನಿನ ಈ ಶಿಲೆಗಳಲ್ಲಿ ಕಬ್ಬಿಣದ ಪರಿಮಾಣವು ಹೆಚ್ಚಾಗಿದ್ದು, ಅವು ಘನಿಸುವ ಮೊದಲು ಧಾರಾಳವಾಗಿ ಹರಿಯುತ್ತಿದ್ದುವು. ಆ ಅಗ್ನಿಪ್ರಳಯದಲ್ಲಿ ಸಸ್ಯವೃಕ್ಷಗಳೆಲ್ಲವೂ ಸುಟ್ಟು ಭೂಮಿಯೇ ಹತ್ತಿಕೊಂಡು ಉರಿಯುತ್ತಿದ್ದಂತಿತ್ತು. ಅದು ಹರಿದ ಕಡೆ ನೆಲವೆಲ್ಲಾ ಸೀದು ಹಸಿಮಣ್ಣೆಲ್ಲ ರೊಟ್ಟಿ ಕಟ್ಟಿಕೊಂಡಿತು. ನೀರಿನಿಂದ ತುಂಬಿದ ಹಳ್ಳಗಳೆಲ್ಲ ಶಿಲೆಯ ಪ್ರವಾಹಕ್ಕೆ ಸಿಕ್ಕಿ ಕ್ಷಣಮಾತ್ರದಲ್ಲಿ ಹಬೆಯಾಗಿ ಶಿಲೆಯನ್ನು ಸಿಡಿಸಿ ಎರಚಿರಬೇಕು. ಪ್ರವಾಹವು ಅಡ್ಡಗಟ್ಟಿ ಹೊಸ ಸರೋವರಗಳನ್ನು ಮಾಡಿತು. ದೊಡ್ಡ ಹೊಳೆಗಳು ಕಾಲಕ್ರಮೇಣ ತಮ್ಮ ಪಾತ್ರಗಳನ್ನು ಹೊಸದಾಗಿ ಕೊರೆದುಕೊಂಡುವು." ಹೀಗೆ ಹನ್ನೆರಡು ಹದಿಮೂರು ಕೋಟಿ ವರ್ಷಗಳ ಹಿಂದೆ ದಖನ್ನಿನಲ್ಲಿ ಭೂಮಿ ಬಿರಿದು, ಬಿರುಕುಗಳ ಮೂಲಕ ಕರಗಿದ ಕಲ್ಲು ಮೇಲುಕ್ಕಿಬಂದು ದಖನ್ನಿನ ಬಹುಭಾಗದ ಮೇಲೆ ಹರಡಿಕೊಂಡು ಕಾಲಕ್ರಮೇಣ ಆರಿ ಕಲ್ಲಾಯಿತು. ಶಿಲಾರಸ ಅನೇಕಸಲ ಪ್ರವಹಿಸಿದ ಫಲವಾಗಿ ಪದರಗಳು ಉಂಟಾದುವು. ಕಡೆಗೆ ದಖನ್ನಿನ ಬಹುಭಾಗ ಶಿಲಾರಸ ಪ್ರದೇಶವಾಗಿ ಎತ್ತರದ ಭೂಭಾಗವಾಯಿತು. ಕಾಲಚಕ್ರ ಮುಂದುರುಳಿದಂತೆಲ್ಲಾ, ಶಿಲಾರಸ ಪ್ರಸ್ಥಭೂಮಿಯನ್ನು ಬಿಸಿಲು ಮಳೆಗಾಳಿಗಳು ಕೊಚ್ಚಿ ಕೊರೆಯತೊಡಗಿದುವು. ಇಂದು ನಮಗೆ ಮೆಟ್ಟಲುಮೆಟ್ಟಲಾಗಿ ಕಾಣುವ ಪರ್ವತಗಳು, ಅನೇಕ ಕೋಟಿ ವರ್ಷಗಳ ಹಿಂದೆ ನಿರ್ಮಾಣವಾದ ಶಿಲಾರಸ ಪ್ರಸ್ಥಭೂಮಿಯನ್ನು ಮಳೆಗಾಳಿಗಳು ತಿಂದುಳಿದ ಶೇಷಾಂಶ. ಅದೇ ಸುಮಾರು ಎರಡುಲಕ್ಷ ಚದರಮೈಲಿಗಳಷ್ಟು ವಿಸ್ತಾರವಾಗಿದೆ!

ಇನ್ನು ಎರಡನೆಯ ಗುಂಪಿಗೆ ಸೇರುವ "ನಗ್ನೀಕರಣ ಪರ್ವತ"ಗಳನ್ನು (Mountains of Denudation) ವಿಚಾರಮಾಡೋಣ. ಈ ಬಗೆಯ ಪರ್ವತಗಳು ದಕ್ಷಿಣ ಇಂಡಿಯಾದಲ್ಲಿ ವಿಶೇಷವಾಗಿವೆ. ಮೈಸೂರಿನ ಬೆಟ್ಟಗುಡ್ಡಗಳಲ್ಲಿ ಹೆಚ್ಚು ಪಾಲು ಈ ಜಾತಿಗೆ ಸೇರಿದವು. ಚಾಮುಂಡಿಬೆಟ್ಟ, ನಂದೀದುರ್ಗ, ಕುದುರೆಮುಖ, ಗೋಪಾಲಸ್ವಾಮಿ ಬೆಟ್ಟ, ದೇವರಾಯನದುರ್ಗ, ನೀಲಗಿರಿ, ಆನೆಮಲೈ ಬೆಟ್ಟಗಳು ಇವೆಲ್ಲವೂ ನಗ್ನೀಕರಣದಿಂದುಂಟಾದುವು. ಸುತ್ತಲಿನ ಪ್ರದೇಶಕ್ಕಿಂತ ಹೆಚ್ಚು ಎತ್ತರದಲ್ಲಿ ಅಲ್ಲಲ್ಲಿ ಈ ಬೆಟ್ಟಗಳು ತಲೆಯೆತ್ತಿ ನಿಂತಿವೆ. ಎತ್ತರದಲ್ಲಿ ಸಣ್ಣಪುಟ್ಟ ಗುಡ್ಡಗಳಿಂದ

ಹಿಡಿದು, ಎಂಟುಸಾವಿರ ಅಡಿಯ ನೀಲಗಿರಿಯಷ್ಟು ವ್ಯತ್ಯಾಸಗಳು ಕಾಣಬರುತ್ತವೆ. ಇಂತಹ ಬೆಟ್ಟಗಳೆಲ್ಲವೂ ಗಟ್ಟಿಯಾದ ಶಿಲೆಯಿಂದಾದುವು. ವಿವಿಧ ಗಟ್ಟಿಯುಳ್ಳ ಶಿಲೆಗಳು ಒಂದು ಪ್ರದೇಶದಲ್ಲಿದ್ದರೆ ಕಡಮೆ ಶಕ್ತಿಯುಳ್ಳ ಶಿಲೆಗಳು ನಗ್ನೀಕರಣಕ್ಕೆ ಬಹಳ ಬೇಗ ತುತ್ತಾಗುತ್ತವೆ. ಅವು ಮಳೆಗಾಳಿಗಳ ಥಕ್ಕೆಯನ್ನು ತಡೆಗಟ್ಟಿ ಎದುರಿಸಿ ನಿಲ್ಲಲಾರದೆ ಕಾಲಕ್ರಮೇಣ ಕುಸಿದು ಪುಡಿಮಣ್ಣಾಗಿ, ಹೊಳೆ ನದಿಗಳೊಡನೆ ಸೇರಿ ಕಡೆಗೆ ಸಮುದ್ರಕ್ಕೆ ಹೋಗಿ ಬೀಳುತ್ತವೆ. ಆದರೆ ಇವುಗಳಿಗಿಂತ ಹೆಚ್ಚು ಶಕ್ತಿಯುಳ್ಳ ಗಟ್ಟಿ ಶಿಲೆಗಳು, ಅಷ್ಟು ನಗ್ನೀಕರಣಕ್ಕೆ ಆಹುತಿಯಾಗುವುದಿಲ್ಲ. ತಲತಲಾಂತರಗಳಿಂದ ಪ್ರಕೃತಿಯ ಶಕ್ತಿಗಳು ಕೊಚ್ಚಿಕೊಂಡೊಯ್ಯಲು ಪ್ರಯತ್ನಿಸಿದರೂ, ಅವುಗಳನ್ನು ಬಹುವಾಗಿ ತಡೆಗಟ್ಟುವ ಶಕ್ತಿ ಗಟ್ಟಿಶಿಲೆಗಳಿಗಿರುವುದರಿಂದ ಅವು ಉಳಿದುಕೊಳ್ಳು




"ನಗ್ನೀಕರಣ ಪರ್ವತಗಳು"

'*a a*' ಗೆರೆಯು ನಗ್ನೀಕರಣಕ್ಕೆ ಮೊದಲಿದ್ದ ಭೂಭಾಗವನ್ನು ತೋರಿಸುತ್ತದೆ. ಕಡಮೆ ಶಕ್ತಿಯುಳ್ಳ ಶಿಲೆಯು ಕೊಚ್ಚಿಹೋದ ಹಾಗೆಲ್ಲಾ, ಒಳಗಿನ ಗಟ್ಟಿಕಲ್ಲು ಎದ್ದು ಕಾಣಿಸತೊಡಗಿತು. ಕಾಲಾನಂತರ ನಮಗೆ ಕಾಣುವ ನೋಟ—*b, b, b.*

ತ್ತವೆ. ಸುತ್ತಮುತ್ತಲಿನ ಶಿಲೆಗಳು ಸವೆದು ಮಾಯವಾದ ಹಾಗೆಲ್ಲಾ ಗಟ್ಟಿ ಕಲ್ಲಿನ ಎತ್ತರ ಹೆಚ್ಚುತ್ತಾ ಹೋಗುತ್ತದೆ. ನಮ್ಮ ಜನರು "ಬೆಟ್ಟ ಬೆಳೆಯುತ್ತದೆ" ಎಂದು ಹೇಳುವುದರಲ್ಲೂ ಕೂಡ ವೈಜ್ಞಾನಿಕದೃಷ್ಟಿಯಿಂದ ಅರ್ಥವುಂಟು. ಎತ್ತರ ಹೆಚ್ಚಿದರೆ ಬೆಟ್ಟ ಬೆಳೆದಂತೆಯೇ ಸರಿ! ನಗ್ನೀಕರಣ ಪರ್ವತಗಳ ನಿರ್ಮಾಣ ಅನಂತವಾದದ್ದು. ಹಿಂದೆ ಆಗುತ್ತಿತ್ತು; ಇಂದು ಆಗುತ್ತಿದೆ; ಮುಂದೆಯೂ ಆಗುತ್ತದೆ. ಆದರೆ ಆ ನಿರ್ಮಾಣ ಕೇವಲ ಒಂದು ಶತಮಾನದೊಳಗೆ ಆಗಿಹೋಗುವ ಮಾನವನಿಗೆ ಅಗೋಚರವಾದದ್ದು. ಅವುಗಳ ನಿರ್ಮಾಣಕ್ಕೆ ಲಕ್ಷಾನುಲಕ್ಷ ವರ್ಷಗಳು ಉರುಳಿಹೋಗಬೇಕು. ಶಕ್ತಿಯಿದ್ದವನು ಬದುಕಬಲ್ಲ; ಬಾಳಬಲ್ಲ; ಕಲ್ಲುಗಳ ಲೋಕದಲ್ಲೂ ಹಾಗೆಯೇ!

ಇದುವರೆಗೂ ನಗ್ನೀಕರಣದಿಂದ, ಗಟ್ಟಿಯಾದ ಶಿಲೆಗಳು ಮಾತ್ರ ಹೇಗೆ ಉಳಿದುಕೊಂಡು ಬೆಟ್ಟಗುಡ್ಡಗಳು ಉಂಟಾಗುತ್ತವೆ ಎಂಬುದನ್ನು ವಿಚಾರ ಮಾಡಿ

ದ್ದಾಯಿತು. ಪುಡಿಯಾಗಿ ಮಣ್ಣಾಗುವ ಶಿಲೆ, ಸಮುದ್ರವನ್ನು ಸೇರಿ, ಅಲ್ಲಿ ಸಮುದ್ರ ತಳದಲ್ಲಿ ಪದರ ಪದರವಾಗಿ ಕೂಡಿ ಜಲಜ ಶಿಲೆಗಳು (Sedimentary Rocks) ನಿರ್ಮಾಣವಾಗುತ್ತವೆ. ಅನೇಕ ಕಾಲವಾದ ಮೇಲೆ ಆ ಜಲಜ ಶಿಲೆಗಳು ಮೇಲಕ್ಕೆ ಪ್ರಕೃತಿ ಶಕ್ತಿಗಳಿಂದ ದೂಡಲ್ಪಡುತ್ತವೆ. ಮತ್ತೆ ನಗ್ನೀಕರಣಕ್ಕೆ ತುತ್ತಾಗುತ್ತವೆ. ಈ ರೀತಿಯ ಜಲಜ ಶಿಲೆಗಳ ನಗ್ನೀಕರಣದಿಂದಲೂ ಪರ್ವತಗಳುಂಟಾಗುತ್ತವೆ. ಅವುಗಳಾಗುವ ಬಗೆಯನ್ನು ಈಗ ನೋಡೋಣ.

ಸ್ವಭಾವತಃ ಜಲಜಶಿಲೆಗಳು ಮಟ್ಟವಾಗಿದ್ದರೂ ನೀರಿನಿಂದ ಮೇಲಕ್ಕೆ ದೂಡಲ್ಪಟ್ಟಾಗ ಅನೇಕ ಮಾರ್ಪಾಟುಗಳನ್ನು ಹೊಂದುತ್ತವೆ. ಜಲಜಶಿಲೆಗಳ ಪದರಗಳು ವಿವಿಧ ಒತ್ತಡಕ್ಕೆ ಸಿಕ್ಕಿ ಹಿಚುಕಿದಂತಾಗಿ ಮಡಿಕೆಗಳು ಉಂಟಾಗುತ್ತವೆ.




**ಮಡಿಚಿಹೋದ ಪದರಶಿಲೆಗಳು**

ನಗ್ನೀಕರಣಕ್ಕೆ ತುತ್ತಾದರೆ ಅದರಿಂದ ಪರ್ವತಗಳು ಉಂಟಾಗುವ ಬಗೆ. ಆಂ=ಆಂಟಿಕ್ಲೈನ್. ಸಿಂ=ಸಿಂಕ್ಲೈನ್. ಸಿಂಕ್ಲೈನು ಬೆಟ್ಟವಾಗಿಯೂ ಆಂಟಿಕ್ಲೈನು ಕಣಿವೆಯಾಗಿಯೂ ಕಾಣುತ್ತದೆ. ನಗ್ನೀಕರಣಕ್ಕೆ ಮುಂಚಿನ ಪದರಗಳನ್ನು ಗೀಟುಗಳಿಂದ ತೋರಿಸಿದೆ.

ಚಿತ್ರದಲ್ಲಿ ತೋರಿಸಿರುವ ಹಾಗೆ ಏರುತಗ್ಗುಗಳು ಉಂಟಾಗುತ್ತವೆ. ಮಡಿಕೆಗಳಲ್ಲಿ ಕೆಲವು ಕೆಳಮುಖವಾಗಿ ಬಾಗಿರುತ್ತವೆ. ಇವುಗಳನ್ನು "ಸಿಂಕ್ಲೈನ್" (Syncline) ಗಳೆಂದು ಕರೆಯುತ್ತಾರೆ. ಮೇಲ್ಮುಖನಾಗಿ ಬಾಗಿರುವ ಮಡಿಕೆಗಳನ್ನು "ಆಂಟಿಕ್ಲೈನ್" (Anticline) ಗಳೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಆಂಟಿಕ್ಲೈನ್ ಇದ್ದರೆ ಅದರ ಪಕ್ಕದಲ್ಲೇ ಸಿಂಕ್ಲೈನೂ ಇರುತ್ತದೆ. ಅಕ್ಕಪಕ್ಕಗಳಿಂದ ಬರುವ ಒತ್ತಡಕ್ಕೆ ಸಿಕ್ಕಿದುದರ ಪರಿಣಾಮವಾಗಿ ಹೀಗೆ ಮಡಿಕೆಗಳು ಉಂಟಾಗುತ್ತವೆ. ಇವುಗಳ ನಿರ್ಮಾಣದಲ್ಲಿ ಸಿಂಕ್ಲೈನಿನ ಶಿಲಾಪದರಗಳು ಹೆಚ್ಚು ಒತ್ತಡಕ್ಕೆ ಸಿಕ್ಕಿ ಒತ್ತಿದಂತಾಗುತ್ತವೆ; ಆದುದರಿಂದ ಹೆಚ್ಚು ಗಟ್ಟಿಯಾಗುತ್ತವೆ. ಆದರೆ ಆಂಟಿಕ್ಲೈನಿನ ಪದರಗಳು ಶಕ್ತಿವಿಹೀನವಾಗುತ್ತವೆ. ಪದರಗಳು ಬಾಗಿ ಮಡಿಚಿ ಹೋಗುವುದರಿಂದ

ಬಿರುಕುಗಳು ಏರ್ಪಡುತ್ತವೆ: ಗಟ್ಟಿಯಾದ ರೊಟ್ಟಿಯನ್ನು ಬಗ್ಗಿಸಿದರೆ ಅದು ಬಿರಿದು ಹೋಗುವ ಹಾಗೆ. ಆಂಟಿಕ್ಲೈನಿನ ಶಿಲೆಯು ಬಹುಬೇಗ ನಗ್ನೀಕರಣ ಶಕ್ತಿಗಳಿಗೆ ಆಹುತಿಯಾಗುತ್ತದೆ. ಸಿಂಕ್ಲೈನು ತಗ್ಗು ಪ್ರದೇಶವಾಗಿರುವುದರಿಂದ ಆಂಟಿಕ್ಲೈನಿನ ಶಿಲೆಗಳು, ಸಿಂಕ್ಲೈನಿನಲ್ಲಿ ಶೇಖರವಾಗುತ್ತವೆ. ಕಾಲಕ್ರಮೇಣ ಆಂಟಿಕ್ಲೈನು ಮಾಯವಾಗುತ್ತದೆ. ಆದರೆ ಹೆಚ್ಚಿನ ಶಕ್ತಿಯುಳ್ಳ ಸಿಂಕ್ಲೈನು, ನಗ್ನೀಕರಣವನ್ನು ತಡೆಯಬಲ್ಲುದು. ಆಂಟಿಕ್ಲೈನಿನ ಶಿಲೆಗಳು ಕೊಚ್ಚಿಹೋಗಿ, ಸಿಂಕ್ಲೈನಿನ ಎರಡು ಕಡೆಯೂ ಕಣಿವೆಗಳು ಉಂಟಾಗುತ್ತವೆ. ಆಗ ಸಿಂಕ್ಲೈನು ನಮಗೆ ಬೆಟ್ಟವಾಗಿ ಕಾಣುತ್ತದೆ. ಮೈಸೂರಿನಲ್ಲಿ ಅನೇಕಕಡೆ ಇಂತಹ ಬೆಟ್ಟಗಳನ್ನು ನಾವು ಕಾಣಬಹುದು. ಅನೇಕ ಕೋಟಿ ವರ್ಷಗಳ ಹಿಂದೆ ನಿರ್ಮಾಣವಾದ ಶಿಲೆಗಳ ಮಡಿಕೆಗಳ ನಗ್ನೀಕರಣದಿಂದ ಬಾಬಾಬುಡನ್‌ಗಿರಿಯು ಉಂಟಾಗಿದೆ.

ಇನ್ನು ಮಹಾ ಪರ್ವತಸ್ತೋಮಗಳನ್ನು ಪರಿಶೀಲಿಸೋಣ. ಪರ್ವತಗಳಲ್ಲೆಲ್ಲಾ ಈ ಗುಂಪಿಗೆ ಸೇರಿದ ಪರ್ವತಗಳ ಹುಟ್ಟಿನ ರೀತಿ ವಿಚಿತ್ರವಾದುದು. ಭೂವೈಜ್ಞಾನಿಕರು ಇಂತಹ ಮಹಾಪರ್ವತಗಳನ್ನು "ಟೆಕ್ಟಾನಿಕ್ ಪರ್ವತಗಳು" (Tectonic Mountains) ಎಂದು ಕರೆಯುತ್ತಾರೆ. ಇಂಡಿಯಾ ದೇಶದ ಉತ್ತರದಲ್ಲಿ ಕಣ್ಣೋಟವನ್ನು ಹಾದು ಹಬ್ಬಿ ಉನ್ನತವಾದ ಹಿಮಾಲಯಾ ಪರ್ವತಸ್ತೋಮವು ಈ ಜಾತಿಗೆ ಸೇರಿದುದು. ಇಂತಹ ಪರ್ವತಸ್ತೋಮಗಳ ನಿರ್ಮಾಣವು ಪ್ರಪಂಚದಲ್ಲಿ ಒಂದೆಡೆಯಲ್ಲಿ ಮಾತ್ರ ಆಗುವುದಿಲ್ಲ. ಹಿಮಾಲಯವು ಜನ್ಮತಾಳಿದಾಗ ಅದರೊಂದಿಗೆ, ಅಮೆರಿಕದ ರಾಕೀಸ್ ಆಂಡೀಸ್ ಪರ್ವತಸ್ತೋಮವೂ, ಯೂರೋಪಿನ ಆಲ್ಪ್ಸ್ ಪರ್ವತಸ್ತೋಮವೂ ನಿರ್ಮಾಣವಾದುವು. ಇವೆಲ್ಲವೂ ಒಂದೇ ಕಾಲದಲ್ಲಿ ಸುಮಾರು ಒಂದೇ ಬಗೆಯ ಶಕ್ತಿಗಳಿಂದ ಉದ್ಭವಿಸಿದುವು.

ಹಿಮಾಲಯಾ ಪರ್ವತಸ್ತೋಮವು ಬಹುವಾಗಿ ಜಲಜಶಿಲೆಗಳಿಂದಾದದ್ದು. ಹಿಮಾಲಯದ ಉನ್ನತ ಶಿಖರಗಳಲ್ಲೂ ಪುರಾತನ ಸಮುದ್ರಪ್ರಾಣಿಗಳ ಅವಶೇಷಗಳು ಸಿಕ್ಕುತ್ತವೆ ಎಂದರೆ ಆಶ್ಚರ್ಯವೇ ಸರಿ! ಸಮುದ್ರತಳದಲ್ಲಿ ಜಲಜಶಿಲೆಗಳು ನಿರ್ಮಾಣವಾಗುವಾಗ, ಅವುಗಳ ಪದರಗಳಲ್ಲಿ ಸತ್ತ ಸಮುದ್ರಪ್ರಾಣಿಗಳೂ ಸೇರಿಹೋಗುತ್ತವೆ. ಸಹಸ್ರಾರು ವರ್ಷಗಳಾದ ಮೇಲೆ ಆ ಜಲಜಶಿಲೆಗಳೇ ಸಮುದ್ರದಿಂದ ಮೇಲಕ್ಕೆ ದೂಡಲ್ಪಟ್ಟು ಹಿಮಾಲಯಾ ಪರ್ವತಸ್ತೋಮವಾಗುವುದರಿಂದ ನಮಗೆ ಅವುಗಳ ಅವಶೇಷಗಳು ಇಂದೂ ಅಚ್ಚಳಿಯದಂತೆ ಸಿಕ್ಕುತ್ತವೆ.

ಮಹಾ ಪರ್ವತಸ್ತೋಮಗಳ ಜನ್ಮ ತುಂಬಾ ತೊಡಕಾದುದು. ಆದರೂ ಭೂವೈಜ್ಞಾನಿಕರು, ಅವುಗಳಲ್ಲಿ ಕಾಣಬರುವ ಶಿಲೆಗಳು, ಅವುಗಳ ರಚನಾ ವೈಶಿಷ್ಟ್ಯ

ಗಳು, ಅವುಗಳು ಹಬ್ಬಿ ಹರಡಿರುವ ಪ್ರದೇಶಗಳು, ಮುಂತಾದ ಹಲವು ವಿಷಯ ಗಳನ್ನು ಸಂಗ್ರಹಿಸಿ, ಅವುಗಳಿಂದ ಪರ್ವತಸ್ತೋಮಗಳ ಹುಟ್ಟನ್ನು ಅರಿಯಲು ಪ್ರಯತ್ನಿಸಿದ್ದಾನೆ. ಇಂದು ಉನ್ನತವಾಗಿ ಹಬ್ಬಿ ಹರಡಿರುವ ಪರ್ವತಸ್ತೋಮಗಳು ಇರುವ ಪ್ರದೇಶದಲ್ಲಿ ಒಂದಾನೊಂದು ಕಾಲದಲ್ಲಿ ವಿಶಾಲ ಸಮುದ್ರವು ಪ್ರಶಾಂತ ವಾಗಿ ಹರಡಿತ್ತು ಎಂದು ಆತನ ಈ ಪರಿಶೀಲನೆಯಿಂದ ಗೊತ್ತಾಗುತ್ತದೆ. ಸಮುದ್ರ ತಳದಲ್ಲಿ ಮೂವತ್ತು ನಲವತ್ತು ಸಹಸ್ರ ಅಡಿ ಎತ್ತರ ಜಲಜಶಿಲೆಗಳು ನಿರ್ಮಾಣ ವಾದುವು. ಮಹಾ ಪರ್ವತಸ್ತೋಮಗಳ ನಿರ್ಮಾಣದಲ್ಲಿ ಇದು ಮೊದಲನೆಯ ಘಟ್ಟ; ಅದೇ ಮುಂದೆ ಹುಟ್ಟುವ ಪರ್ವತಕ್ಕೆ ಬೇಕಾದ ಜಲಜಶಿಲೆಗಳ ತಯಾರಿಕೆ. ಹೀಗೆ ಜಲಜಶಿಲೆಗಳು ಉಂಟಾಗುತ್ತಿರುವಾಗ ಅಕ್ಕಪಕ್ಕಗಳಿಂದ ಒತ್ತುವಿಕೆಯು ಪ್ರಾರಂಭ ವಾಗುತ್ತದೆ. ಪರ್ವತಜನಕಶಕ್ತಿಗಳು (Tectonic Forces) ಒತ್ತಿ ಜಲಜಶಿಲೆಗಳನ್ನು ಹಿಚುಕುತ್ತವೆ; ಮಡಿಚುತ್ತವೆ; ಪದರಗಳನ್ನು ಮುರಿಯುತ್ತವೆ. ಎಂಟುನೂರು ಒಂಬತ್ತುನೂರು ಮೈಲಿ ಅಗಲ ಹರಡಿರುವ ಜಲಜಶಿಲೆಗಳು ತೊಂಬತ್ತು ಅಥವಾ ನೂರು ಮೈಲುಗಳಷ್ಟು ಪ್ರದೇಶಕ್ಕೆ ಹಿಚುಕಲ್ಪಡುತ್ತವೆ. ಆಲ್ಪ್ಸ ಪರ್ವತಸ್ತೋಮಗಳು ಈ ರೀತಿ ಪ್ರಕೃತಿಶಕ್ತಿಗಳಿಂದ ಹಿಚುಕಲ್ಪಟ್ಟಿವೆ! ಹೀಗೆ ಜಲಜಶಿಲೆಗಳು ಒತ್ತಲ್ಪಡುವಾಗ, ಭಾರಿ ಸಿಂಕ್ಲೈನ್‌ಗಳೂ ಆಂಟಿಕ್ಲೈನುಗಳೂ ಉಂಟಾಗುತ್ತವೆ. ಒಂದು ಪಕ್ಕದಿಂದ ಒತ್ತಡ ಹೆಚ್ಚಾದುದರ ಫಲವಾಗಿ ಆಂಟಿಕ್ಲೈನುಗಳು ಬಾಗಿ ಒರಗಿ ಕುಳಿತುಕೊಳ್ಳುತ್ತವೆ. ಅನೇಕ ಸೀಳಿಕೆಗಳು ಉಂಟಾಗುತ್ತವೆ. ಒತ್ತಡ ವಿಪರೀತವಾದಾಗ, ಜಲಜಶಿಲೆಗಳು ಮುರಿದು, ಒಂದರಮೇಲೊಂದರಂತೆ ಕುಳಿತುಕೊಳ್ಳುತ್ತವೆ.

ಹೀಗೆ ಪರ್ವತಜನಕಶಕ್ತಿಗಳು, ಸಮುದ್ರತಳದಲ್ಲಿ ನಿರ್ಮಾಣವಾದ ಜಲಜಶಿಲೆ ಗಳನ್ನು ಒತ್ತಿ, ಮೇಲೆತ್ತಿ, ಪರ್ವತಗಳನ್ನು ಮಾಡಿದುವು. ಈ ವಿಚಿತ್ರರಚನೆ ಒಂದು ದಿನದಲ್ಲಲ್ಲ; ಒಂದುನೂರು ವರ್ಷದಲ್ಲೂ ಕೂಡ ಆಗಲಿಲ್ಲ. ಸಾವಿರಾರು ವರ್ಷಗಳಲ್ಲಿ ಕ್ರಮೇಣ ಉಂಟಾಯಿತು. ಒಮ್ಮೆಯೇ ಒತ್ತಡದ ಫಲವಾಗಿ ಮಡಿಕೆಗಳೂ ಬಿರುಕು ಗಳೂ ಉಂಟಾಗಲಿಲ್ಲ. ಪುನಃಪುನಃ ಅಕ್ಕಪಕ್ಕಗಳಿಂದ ವಿವಿಧಶಕ್ತಿಗಳು ಒತ್ತಿದುದರ ಫಲವಾಗಿ ಕಡೆಗೆ ಮಹಾಪರ್ವತಸ್ತೋಮಗಳು ಜನ್ಮವನ್ನು ತಾಳುತ್ತವೆ. ಇಂದು ನಮಗೆ ಕಾಣುತ್ತಿರುವ ಹಿಮಾಲಯದ ಉನ್ನತ ಶಿಖರಗಳೂ ಕೂಡ, ಅವುಗಳ ಜನನ ವಾದಂದಿನಿಂದ ನಗ್ನೀಕರಣಶಕ್ತಿಗಳು ತಿಂದುಳಿದ ಶೇಷಾಂಶ. ಎಂದರೆ, ಆದಿಯಲ್ಲಿ ಹಿಮಾಲಯ ಪರ್ವತಸ್ತೋಮವು ಇನ್ನೂ ಎಷ್ಟು ಉನ್ನತವಾಗಿದ್ದಿರಬೇಕು!

ಭೂಚರಿತ್ರೆಯಲ್ಲಿ ಹಿಮಾಲಯಾ ಮತ್ತು 'ಆಲ್ಪ್ಸ' ಪರ್ವತಸ್ತೋಮಗಳ ನಿರ್ಮಾಣ ಬಹಳ ಈಚಿನದು. ಆದರೆ ಇದಕ್ಕೆ ಹಿಂದೆ ಮೂರು ನಾಲ್ಕು ಭಾರಿ

ಮಹಾ ಪರ್ವತಸ್ತೋಮಗಳ ಜನನ ಆಗಿದೆ. ಅವುಗಳ ಹುಟ್ಟು ಆಗಾಗ ಮರಳಿ ಮರಳಿ ಉಂಟಾಗಿದೆ. ಮತ್ತೆ ಮತ್ತೆ ಖಂಡಗಳು "ಕರಗಿ" ಜಲಜಶಿಲೆಗಳು ನಿರ್ಮಾಣ ವಾಗಿವೆ; ಪರ್ವತಜನಕ ಶಕ್ತಿಗಳು ಹಲವುಬಾರಿ ಅವುಗಳನ್ನು ಒತ್ತಿ ಪರ್ವತಗಳನ್ನು ಮಾಡಿವೆ. ಒಂದೇ ಕಥೆ ಅನೇಕಸಲ ಆಗಿಹೋಗಿದೆ. ಅನೇಕಕೋಟಿ ವರ್ಷಗಳ ಹಿಂದೆ ಇಂದಿನ ಆರಾವಳೀ ಪರ್ವತಗಳು, ಹಿಮಾಲಯದ ಹಾಗೆ ಉನ್ನತವಾಗಿ, ದಖನ್ನಿನಿಂದ ಇಂಡಿಯದ ಉತ್ತರದ ಗಡಿಗಳಿಂದಾಚೆಯವರೆಗೂ ಹಬ್ಬಿ ಹರಡಿತ್ತು.

ಪ್ರಕೃತಿಯ ಚಿತ್ರವಿಚಿತ್ರಗಳ ಒಗಟುಗಳನ್ನು ಬಿಡಿಸುವುದು ಭೂವೈಜ್ಞಾನಿಕನ ಗುರಿ. ಈ ಜಗತ್ತಿನಲ್ಲಿ ನಾವು ಹಲವು ವಿಚಿತ್ರಗಳನ್ನು ಕಾಣುತ್ತೇವೆ:—ನದಿ ಹೊಳೆಗಳು, ಚಿಮ್ಮುವ ಬುಗ್ಗೆಗಳು, ಭೂಕಂಪಗಳು, ಜ್ವಾಲಾಮುಖಿಗಳು, ಬೆಟ್ಟಗುಡ್ಡಗಳು, ಮಹಾ ಪರ್ವತಸ್ತೋಮಗಳು. ಇವುಗಳೆಲ್ಲದರ ಹುಟ್ಟು ಬದುಕು ಸಾವುಗಳನ್ನು ತನಗೆ ಕಾಣಬರುವ ಹರುಕುಮುರುಕಾದ ಕೆಲವು ಚಿತ್ರಗಳನ್ನು ಮುಂದಿಟ್ಟುಕೊಂಡು ವಿಮರ್ಶಿಸಿ ಅವುಗಳನ್ನು ವೈಜ್ಞಾನಿಕರ ದೃಷ್ಟಿಯಿಂದ ಸರಿಯಾಗಿ ಜೋಡಿಸಿ ಕೋಟ್ಯನುಕೋಟಿ ವರ್ಷಗಳ ಹಿಂದೆ ನಡೆದುಹೋದ ಭೂಚರಿತ್ರೆಯ ವಿದ್ಯಮಾನ ಗಳನ್ನು ನೋಡುವುದೇ ಭೂವೈಜ್ಞಾನಿಕನ ಗುರಿ.*

ಎಂ. ವಿ. ನಾರಾಯಣಮೂರ್ತಿ.

---

* ಪ್ರೊಫೆಸರ್ ಎಲ್. ರಾಮರಾವ್, ಎಂ.ಎ., ಎಫ್.ಜಿ.ಎಸ್., ಎಫ್.ಎನ್.ವಿ. ಅವರು ಕೊಟ್ಟ ಒಂದು ಉಪನ್ಯಾಸದ ಆಧಾರದ ಮೇಲೆ ಬರೆದದ್ದು.

# ಜೀವವಾಣಿ

"ದೇವವಾಣಿ"ಯ ತಿಳಿವ ಮತಿಯ ಪಡೆಯಲು ನಮ್ಮ
ಜೀವವಾಣಿಯು ಮೊದಲು ತಿಳಿಯಬೇಕು;
'ಕರ್ಮ'ವೆಂದರು ಒಂದೆ 'ಕೆಲಸ'ವೆಂದರು ಒಂದೆ
'ಕರ್ಮಕೆಲಸ'ಗಳಲ್ಲಿ 'ಕೆಲಸ' ಸುಲಭ!

ಉಪ್ಪು ಹುಳಿಗಳ ಜೊತೆಗೆ ಬೆರೆದರೇನು ಮಸಾಲೆ
ಸೊಪ್ಪು ಹಾಕಿದ ಮೇಲೆ 'ಸೊಪ್ಪಿನ ಹುಳಿ';
ಸಕ್ಕದದ ಸಕ್ಕರೆಯ ಹಾಕಿ ಮಾಡಿದರೇನು
ಪಾಕ ಕನ್ನಡವೆನಲು ಏಕೆ ಮುಳಿಸು?

ಗೀರ್ವಾಣವಾಣಿಯಲಿ ಉಚ್ಚರಿಸಿದುದೆ ವೇದ
ಉಳಿದುದೆಲ್ಲವು ಬರಡು ಎನ್ನಲಹುದೆ?
ಆತ್ಮ ಮನವೆರಡರಲಿ ಆತ್ಮ ನಾವೋ ಮನವೊ—
ಕನ್ನಡವೊ ಸಕ್ಕದವೊ ತಿಳಿದು ಹೇಳಿ!

ಕನ್ನಡದ ಮನೆಯಲ್ಲಿ ಕನ್ನಡಿತಿ ಯಜಮಾನಿ
ಮಿಕ್ಕ ಹೆಂಗಸರೆಲ್ಲ ಒಕ್ಕಲಷ್ಟೆ!
ಬಿನ್ನಾಣದಳಿವೆಣ್ಣು ಚುಂಬಿಸಲು ಫಲವೇನು?
ಕಣ್ಣನೋಟವೆ ಸಾಕು ಮನದನ್ನೆಯ!

ಬಂದರೇನು ವಿಭಾವ, ಅನುಭಾವ, ಚಳಭಾವ
ರಸ, ಅಂಗಿ, ಕನ್ನಡವು; ಉಳಿದುದಂಗ;
ಶಾಯಿ ಲೇಖಿನಿಯೆಲ್ಲ ಯಾರು ಕೊಟ್ಟರೆ ಏನು
ತಾಯಿನುಡಿ ನಾವೀಗ ಬರೆವುದೆಲ್ಲ!

ಆಂಗ್ಲ ಸಕ್ಕದದೆರಡು ಹರಳುಗಳ ಕನ್ನಡಕ
ಹಾಕಿದ್ದರೇನಲ್ಲಿ ಇರುವುದಂಟೆ?
ಅಣ್ಣತಂಗಿಯರೆ ಈ ಕನ್ನಡಕವಲ್ಲದಿರೆ
ಕಣ್ಣು ನಿಮ್ಮದೆ ಎನಲು ಶಂಕೆಯುಂಟೆ?

ಬಿ. ಎಚ್. ಶ್ರೀಧರ.

---

# ಮರ್‍ಹಾಟಿಯಲ್ಲಿ ಹುದುಗಿರುವ ಕನ್ನಡದ ಹಲವು ಅವಶೇಷಗಳು

೨. **ಬಂಬಲ್—ಬಲ್ವಲ**—'ಬಂಬಲ್' ಈ ಮಾತು ಕನ್ನಡದಲ್ಲಿ ಇಂದು ಬಳಕೆಯಲ್ಲಿ ಇಲ್ಲ. ಮರ್‍ಹಾಟಿಯಲ್ಲಿಯೂ ಇದು ಅಪರೂಪವಾಗುತ್ತ ನಡೆದಿರುವುದಾದರೂ ತೀರ ಇಲ್ಲವೆಂದಲ್ಲ. 'ಪಾಯ ರಕ್ತ ಬಂಬಾಳ ಜಾಹಲಾ' (ಕಾಲು ತುಂಬ ನೆತ್ತರದ್ದಾಯಿತು) ಇಂತಹ ಕೆಲವು ಪ್ರಯೋಗಗಳನ್ನು ಇಂದಿಗೂ ಮರ್‍ಹಾಟಿಯಲ್ಲಿ ಕಾಣಬಹುದು.

ಹಳಗನ್ನಡದಲ್ಲಿ 'ಬಂಬಲ್' ಶಬ್ದದ ಪ್ರಯೋಗಗಳು ಹೇರಳವಾಗಿರುವಂತೆ ಹಳೆಯ ಮರ್‍ಹಾಟಿಯಲ್ಲಿಯೂ ಈ ಮಾತು ಬಹಳ ಲೋಕಪ್ರಿಯವಾಗಿದ್ದಿತು. ಮರ್‍ಹಾಟಿ ಸಾಹಿತ್ಯವು ಜನ್ಮತಾಳುವ ಮೊದಲಿನಿಂದಲೇ ಕನ್ನಡದಲ್ಲಿ ಈ ಪದದ ಪ್ರಯೋಗಗಳನ್ನು ಕಾಣಬಹುದು. 'ಮರ್‍ಹಾಟಿ ಸಾಹಿತ್ಯವು ಸ್ಪಷ್ಟವಾಗಿ ಕಾಣಿಸಿಕೊಳ್ಳಲಾರಂಭಿಸಿದುದು ೧೨ನೆಯ ಶತಮಾನದಿಂದ', ಎಂದು ಮಹಾರಾಷ್ಟ್ರದ ಸಂಶೋಧಕರೆ ಹೇಳುತ್ತಾರೆ. ಕನ್ನಡದಲ್ಲಿ ೧೦ನೆಯ ಶತಮಾನದ ಆದಿಪಂಪನಲ್ಲಿಯೆ 'ಬಂಬಲ್' ಪದದ ಪ್ರಯೋಗವು ದೊರೆಯುತ್ತದೆ: 'ಆಗಳ್ ಆ ಪೊಬಲ ಬೀದಿಗಳೊಳೆಲ್ಲಂ . . . . . ಗುಡಿಯುಂ ತೋರಣಂಗಳುಮಂ ತುಱುಗಲುಂ ಬಂಬಲುಂ ಆಗೆ ಕಟ್ಟಿಸಿ', (ಪಂ. ಭಾ. ೪, ೫೫ ಗದ್ಯ). ಇಲ್ಲಿ ಪಂಪನು 'ತುಱುಗಲುಂ—ಬಂಬಲುಂ' ಎಂದು ಜೋಡುನುಡಿಯನ್ನು (doublet) ಬಳಸಿದ್ದಾನೆ. 'ಪರ್ವಿ-ಕೊರ್ವಿ,' 'ತೊಂಡು-ತೊಟಿಸು' ಎಂಬೀ ಬಗೆಯಾಗಿ ಒಂದೇ ಅರ್ಥದ ಎರಡು ಶಬ್ದಗಳನ್ನು—'ಜೋಡುನುಡಿ'ಯನ್ನು—ಪ್ರಯೋಗಿಸುವ ಒಂದು ರೂಢಿಯು ಪಂಪನ ಪ್ರಯೋಗದಲ್ಲಿ ಅನುಭವಕ್ಕೆ ಬರುತ್ತದೆ.

ಹದಿಮೂರನೆಯ ಶತಮಾನದ ಜ್ಞಾನೇಶ್ವರಿಯಲ್ಲಿ 'ಬಂಬಾಳು' ಶಬ್ದವು ಕಣ್ಣಿಗೆ ಬೀಳುತ್ತದೆ. ಜ್ಞಾನದೇವನು ಗೀತೆಯ 'ಸ ಶಬ್ದಃ ತುಮುಲೋಽಭವತ್' ಎಂಬುದರ ಅರ್ಥವನ್ನು ವಿವರಿಸುವಾಗ "ಐಸಾ ಅದ್ಭುತ ತೂರ ಬಂಬಾಳು. ಐಕೋನಿ ಬ್ರಹ್ಮಾ ವ್ಯಾಕುಳು" ಎಂದು ಹೇಳಿದ್ದಾನೆ. ಜ್ಞಾನೇಶ್ವರನು ಇಲ್ಲಿ ಬಳಸಿದ 'ತೂರ-ಬಂಬಾಳು' ಎಂಬ ಮಾತು ಆದಿಪಂಪನ 'ತುಱುಗಲುಂ-ಬಂಬಲುಂ' ಎಂಬ ನುಡಿಯನ್ನು ನೆನಪಿಗೆ ತರುತ್ತದೆ.

ಜ್ಞಾನೇಶ್ವರನಿಗಿಂತಲೂ ಸ್ವಲ್ಪ ಹಿಂದಿನ 'ಮಹಾನುಭಾವ' ಪಂಥದ ಸಾಹಿತ್ಯ

ದಲ್ಲಿ (ಮರ್ಹಾಟಿಯ ಸಾಹಿತ್ಯದ ಉಗಮವು ಇಲ್ಲಿಂದಲೆ) 'ಬಂಬಾಳು' ಪದವು ದೊರೆಯುತ್ತದೆ. ಮರ್ಹಾಟಿಯಲ್ಲಿ ಇದು ಸ್ವಲ್ಪ ವಿವಿಧ ರೂಪಗಳನ್ನು ತಳೆದಿದೆ: 'ಬಂಬಾಳು'; 'ಬಂಬಾಳ'; 'ಬಂಬಾಳಿ'; ಮರ್ಹಾಟಿ ಸೊಲ್ಲಿಗೆ ಸರಿಹೋಗುವಂತೆ ಮಾರ್ಪಡುವಾಗ ಇದು, 'ಬಂಭಾಳು', 'ಭಂಭಾಳು' ಎಂದೂ ರೂಪವನ್ನು ತಾಳಿದೆ. ಲೋಕಮಾನ್ಯ ತಿಲಕರು, ಹಿಂದುಸ್ಥಾನ ಸರಕಾರದ ಆಯ-ವ್ಯಯ ಪತ್ರಿಕೆಯನ್ನು ಟೀಕಿಸುವಾಗ "ವಾಢತಾ ಭಂಭಾಳಾ ಖರ್ಚ ಹುಂಡಣಾ ವಳೀ ಮಳೀಂಚ ಹೋತೋ" (ಹೆಚ್ಚುವ ಬಂಬಲವಾದ ಖರ್ಚಿಗೆ ಹುಂಡಣಾವಳಿಯೆ ಕಾರಣ) ಎಂಬಲ್ಲಿ 'ಭಂಭಾಳ' ಪದಪ್ರಯೋಗವನ್ನು ಮಾಡಿರುವರು. (ಮಹಾರಾಷ್ಟ್ರ ಶಬ್ದಕೋಶ ನೋಡಿ.)

ಕನ್ನಡದ ಬಂಬಲ್ ಮತ್ತು ಮರ್ಹಾಟಿಯ 'ಬಂಬಾಳು,' 'ಭಂಭಾಳು' ಮೊದಲಾದ ರೂಪಗಳು ಅಭಿನ್ನವೆಂದು ಸಿದ್ಧಪಡಿಸುವ ಆವಶ್ಯಕತೆಯು ತೋರುವುದಿಲ್ಲ. ಏಕೆಂದರೆ ಇವುಗಳಲ್ಲಿರುವ ಅರ್ಥಸಾಮ್ಯ ಮತ್ತು ರೂಪಸಾಮ್ಯವು ಅಷ್ಟು ಸ್ಪಷ್ಟವಾಗಿದೆ. ಕನ್ನಡದಲ್ಲಿ ಲಕಾರವಾಗಿ ಹೇಳುವ ಮಾತನ್ನೆ ಮರ್ಹಾಟಿಯಲ್ಲಿ ಳಕಾರವಾಗಿ ಉಚ್ಚರಿಸುವುದುಂಟು. ಉದಾ: ಕಮಲ—ಕಮಳ; ಕಾಲ—ಕಾಳ ಮುಂತಾದವು. ಇದರಂತೆ ಕನ್ನಡದಲ್ಲಿ ಅಲ್ಪಪ್ರಾಣವಾಗಿರುವುದು ಮರ್ಹಾಟಿಯ ಬಾಯಲ್ಲಿ ಮಹಾಪ್ರಾಣವಾಗಿ ಪರಿಣಮಿಸುವುದು. ಉದಾ: ಕೊಬ್ಬರಿ—ಖೊಬರೇಂ, ಕಳ—ಖಳ: ಅಡಿ (ಮಾವಿನ ಹಣ್ಣಿನದು) ಅಢೀ ಮುಂತಾದವು. ವ್ಯಂಜನಾಂತ ಪದಗಳು ಉಕಾರಾಂತವಾಗಿ ಬಳಕೆಯಲ್ಲಿ ಬರುವುದೂ, ಉಕಾರಾಂತಗಳು ಅಕಾರಾಂತಗಳಾಗಿ ನಡೆವಳಿಯಲ್ಲಿ ಬರುವುದೂ ಸಾಮಾನ್ಯ ಅನುಭವದ ಸಂಗತಿಯಾಗಿದೆ. ಆದುದರಿಂದಲೆ ಬಂಬಲ್—ಬಂಬಳು—ಬಂಬಾಳು—ಬಂಬಳ—ಭಂಭಾಳ ಇತ್ಯಾದಿ ರೂಪಗಳೆಲ್ಲ ಅಭಿನ್ನವಾದುವುಗಳೆಂದು ಹೇಳಬೇಕಾಗುತ್ತದೆ. ಮರ್ಹಾಟಿಯ ಸೊಲ್ಲಿನ ವೈಶಿಷ್ಟ್ಯವನ್ನು ಅರಿತವರಿಗೆ ಬಂಬಳು—ಬಂಬಾಳು ಹೇಗಾಗಿರಬಹುದೆಂಬುದನ್ನು ವಿವರಿಸುವ ಆವಶ್ಯಕತೆಯೆ ಇಲ್ಲ. 'ಮುದ್ಗಲ,' 'ನಳ' (ನಲ್ಲಿ), 'ಕಾರಣ,' 'ವಿಸ್ಮಯ' ಎಂದು ಮರ್ಹಾಟಿಗರು ಎಳೆದು ಉಚ್ಚರಿಸುವ ಪದಗಳನ್ನು ಕನ್ನಡಿಗರು ಎಳೆಯದೆ ಒಮ್ಮೆಲೆ ಹೇಳುವರು. ಈ ಉಚ್ಚಾರಭೇದದ ಪರಿಣಾಮದಿಂದಲೆ ಕನ್ನಡದಲ್ಲಿ 'ಬಂಬಲ್' ಎಂದು ಹೇಳುವ ಮಾತು ಮರ್ಹಾಟಿಯಲ್ಲಿ 'ಬಂಬಾಳು' ಆಗಿದ್ದುದು.

ಬಂಬಲ್ ಅಥವಾ ಬಂಬಳ ಎಂಬ ಮಾತು ಈಗ ಕನ್ನಡದಲ್ಲಿ ಬಳಕೆಯಲ್ಲಿಲ್ಲವೆಂಬುದು ನಿಜವಿದ್ದರೂ 'ಬಳಬಳ' ಎಂಬ ಒಂದು ಪದವನ್ನು ಇದೇ ಅರ್ಥದಲ್ಲಿ ಆಗಾಗ ಉಪಯೋಗಿಸುವುದುಂಟು. 'ನೆತ್ತರು ಬಳಬಳನೆ ಸುರಿಯಿತು,' ಎಂಬಲ್ಲಿ

'ಬಳಬಳ' ಎಂದರೆ ಒಂದೇ ಸಮನೆ, ಅತಿಶಯ, ಎಂಬರ್ಥವು ಸ್ಪಷ್ಟವಿದೆ. 'ಬಳಬಳ' ಎಂಬುದು ದ್ವಿರುಕ್ತಿ. 'ಬಳಬಳ' ಎಂಬ ದ್ವಿರುಕ್ತಿಗೆ ಅತಿಶಯ, ವಿಪುಲವೆಂಬರ್ಥವು ಇರುವುದಾದರೆ ಇದರೊಳಗಣ 'ಬಳ' ಎಂಬ ಒಂದೆ ನುಡಿಗೂ ಆ ಅರ್ಥವಿರಬೇಕೆಂಬುದನ್ನು ಸಿದ್ಧಪಡಿಸಬೇಕಾದ ಕಾರಣವಿಲ್ಲ. 'ಬಳ'ಗ ಎಂಬ ಮಾತಿನಲ್ಲಿ ಗುಂಪು, ಸಮುದಾಯವೆಂದಿರುವ ಅರ್ಥವು ಈ ಮಾತಿಗೆ ಪುಷ್ಟಿಯನ್ನೀಯುತ್ತಿದೆ. ಆದುದರಿಂದ 'ಬಳ' ಎಂದರೆ ಗುಂಪು, ಸಮುದಾಯ, ಅತಿಶಯ, ಬಹಳ.

ಹಳಗನ್ನಡದಲ್ಲಿ 'ಬಲ್ವಲ,' 'ಬಳ್ವಳ' ಎಂಬ ಒಂದು ಮಾತಿದೆ. 'ರಿಪು ಬಲಂ ಬಲ್ವಲಂ ಆದೊಡೆ ಸಿಂಹನಾದಮಂ ಮಾಳ್ಪಂ' 'ಬಲ್ವಲಂ ಅಪ್ಪ ಬವರಂ' (ಪಂಪರಾಮಾಯಣ); 'ಬಳ್ವಳನೆ ಬೆಳೆವುದು' ಎಂಬೀ ಬಗೆಯ ಪ್ರಯೋಗಗಳು ದೊರೆಯುತ್ತವೆ. ಈ ಮಾತಿಗೆ ಅತಿಶಯ, ಬಹಳ ಎಂಬರ್ಥವೆ ಉಂಟು. ಕನ್ನಡದ ಒಕ್ಕಲು ಮಕ್ಕಳ ಮಾತಿನಲ್ಲಿ 'ಭಾಳ' (ಬಹಳ) ಎಂಬ ಒಂದು ಶಬ್ದವು ಮಾತು ಮಾತಿಗೆ ಕೇಳಬರುವುದು. 'ಭಾಳ' ಎಂಬುದನ್ನು ತಿದ್ದಿ (?) 'ಬಹಳ' ಎಂದು ಬರೆವ ವಾಡಿಕೆಯಾಗಿದೆ. ಮತ್ತು 'ಬಹಳ' ಎಂಬುದು ಸಂಸ್ಕೃತದ 'ಬಹುಲ'ದಿಂದ ಬಂದಿತೆಂದು ಒಂದು ಗ್ರಹಿಕೆಯುಂಟು. ಆದರೆ 'ಬಹು' (ಲ) ಇದರಿಂದ ಭಾಳ (ಬಳ) ಬಂದಿತೆಂದು ಗ್ರಹಿಸುವುದಕ್ಕಿಂತಲೂ 'ಬಳ' (ಬಲ್) ಇದೇ ಇಂದಿನ ಉಚ್ಚಾರದಲ್ಲಿ 'ಭಾಳ' ವಾಗಿದೆಯೆಂದು ಊಹಿಸುವುದಕ್ಕೇ ಹೆಚ್ಚು ಅವಕಾಶವಿದೆ. ಬಲ್ವಲ ಅಥವಾ ಬಳ್ವಳ ಎಂಬಲ್ಲಿ ಬಲ—ಬಳ ಶಬ್ದದ ದ್ವಿರುಕ್ತಿಯುಂಟೆಂದು ಬೇರೆ ಹೇಳಬೇಕಾಗಿಲ್ಲ. ಆದುದರಿಂದ ಈ ತೆರನಾಗಿಯೂ ಬಲ—ಬಳ ಎಂಬುದಕ್ಕೆ ಗುಂಪು, ಸಮುದಾಯ ಬಹಳ ಅತಿಶಯವೆಂಬರ್ಥವೇ ಎಂದು ನಿದರ್ಶನಕ್ಕೆ ಬರುತ್ತಿದೆ.

ಬಳಬಳ, ಬಳ್ವಳ, ಬಲ್ವಲ ಮತ್ತು ಬಂಬಲ, (ಬಂಭಾಳ) ಇವೆಲ್ಲವೂ ಒಂದೇ ಅರ್ಥದ ಪದಗಳಾಗಿವೆ. ಬಂಬಲವೂ ಬಳಬಳ ಬಳ್ವಳಗಳಂತೆ ದ್ವಿರುಕ್ತಿಯಾಗಿರಬೇಕೆಂದು ಕಂಡುಹಿಡಿಯಬಹುದಾಗಿದೆ. ಕನ್ನಡ ಒಕ್ಕಲುಮಕ್ಕಳ ಬಾಯಲ್ಲಿರುವ 'ಭಾಳ' ಎಂಬುದು ಮರ್‍ಹಾಟಿ ಭಂ'ಭಾಳ' ಎಂಬಲ್ಲಿ ಕಾಣಿಸಿಕೊಳ್ಳುತ್ತಿದೆ. ಆದುದರಿಂದ ಬಂಬಲ್ ಎಂಬುದು ಬಲ್ ಎಂಬುದರ ಜೋಡುನುಡಿ (ದ್ವಿರುಕ್ತಿ) ಯಾಗಿರಬೇಕೆಂದು ಅರಿತುಕೊಳ್ಳಬಹುದಾಗಿದೆ. ಬಲ್ + ಬಲ್ = ಬಂಬಲ್ ; ಬಳ + ಬಳ = ಬಂಬಳ—ಬಂಬಾಳ—ಭಂಭಾಳ.

ಕನ್ನಡದಲ್ಲಿ 'ಬಲ್' ಎಂಬ ಶಬ್ದಮೂಲವೊಂದುಂಟು. 'ಬಲ್ಲಿತು' ಎಂಬ ವಿಶೇಷಣವು ಅದರಿಂದಲೇ ಬಂದಿದೆ. ಬಲ=ಭಾಳ ಇವೆಲ್ಲವೂ ಒಂದೇ. ಬಲ್ಸರಿ (ದೊಡ್ಡ ಮಳೆ) ಎಂದು ಹೇಳುವಂತೆ ಬಂಬಲ್ ಸರಿ ಎಂಬ ಪ್ರಯೋಗಗಳೂ ದೊರೆ

ಯುತ್ತವೆ. ಇಂತು ಬಂಬಲ್ ಎಂಬುದರ ಮೂಲವು ಕನ್ನಡದ 'ಬಲ್' ಎಂಬಲ್ಲಿ ಉಂಟೆಂದು ಗೊತ್ತಾಗುತ್ತಿದೆ.

ತಮಿಳಿನ ವಲ್, ಮಲೆಯಾಳಿನ ವನ್ ಎಂಬುದರೊಡನೆ ಕನ್ನಡದ ಬಲ್ ಇದರ ಹೊಂದಿಕೆಯುಂಟೆಂದು ರೆ. ಕಿಟ್ಟೆಲ್ಲರು ಸೂಚಿಸುತ್ತಾರೆ. ಬಂಬಲ್ ಎಂಬಲ್ಲಿ (ಬಲ್ + ಬಲ್) ಲ್‌ಕಾರವು ಅನುಸ್ವಾರವಾಗಿ ಹೇಗೆ ಪರಿಣಮಿಸಿತೆಂದು ಒಂದು ಸಂದೇಹವುಂಟಾಗುವಂತಿದೆ. ತಮಿಳಿನಲ್ಲಿರುವ ವಲ್ ಮಲೆಯಾಳಿನಲ್ಲಿ ವನ್ ಆಗಿರುವುದನ್ನು ನಿರೀಕ್ಷಿಸಿದರೆ ಆ ಸಂದೇಹ ನಿವೃತ್ತಿಯಾಗುತ್ತದೆ.

ಜಯಜಯಕಾರದಲ್ಲಿ ಹಿರಿಮೆಯಾಗಲಿ; ಹೆಚ್ಚಳವಾಗಲಿ ಎಂಬ ಭಾವವು ಅಡಕವಾಗಿರುವುದನ್ನು ಎಲ್ಲರೂ ಒಪ್ಪುವುದುಂಟು. 'ಚಾಂಗು, ಭಲಾ,' ಎಂಬಲ್ಲಿ ಚೆನ್ನು ಆಗಲಿ ಬಲ್ಲಿತ್ತಾಗಲಿ ಎಂಬೀ ಆಕಾಂಕ್ಷೆಯೆ ವ್ಯಕ್ತವಾಗಿದೆ. ಮಲ್ಲಯ್ಯ (ಮಾರ್ತಾಂಡ) ನ ಭಕ್ತರು ಆ ದೇವನ ದರ್ಶನಕಾಲದಲ್ಲಿ ಚಾಂಗು ಭಲ ಎಂದು ಗರ್ಜಿಸುವರು. ಅದರಂತೆ ಗೋಸಾವಿಗಳು ಶಿವದರ್ಶನ ಕಾಲದಲ್ಲಿ ಭಂ ಭಂ ಭೋಲಾನಾಥ ಎಂದು ಗಜರಿ ಗರ್ಜಿಸುವರು. ಮರ್ಹಾಟಿಯಲ್ಲಿ ಭಂಭೊ, ಬಂಬ್ಯಾ, ಬಂಬ ಎಂಬುದು ಹಿರಿ, ದೊಡ್ಡ ಎಂಬರ್ಥದಲ್ಲಿ ಈಗಲೂ ವ್ಯವಹರಿಸುವುದು (ಮಹಾರಾಷ್ಟ್ರ ಶಬ್ದಕೋಶ ನೋಡಿ). ಅಗಡುಬಂಬ, ಮಹಾ: ಜಂಗೀ. ಆಧುನಿಕ ಸಂಶೋಧಕರು ದ್ರಾವಿಡ ಜನಾಂಗದ ದೇವತೆಯೆಂದು ನಿರ್ಧರಿಸಿರುವ ರುದ್ರ—ಶಿವನನ್ನು ಜಯಜಯಕಾರದಲ್ಲಿ ಬಂ ಬಂ—ಬಲ್—ಬಲ್ (ಹಿರಿ, ಮಹಾ) ಎಂದು ದ್ರಾವಿಡವರ್ಗದ ಮಾತಿನಿಂದಲೇ ಹೊಗಳುವುದರಲ್ಲಿ ಇರುವ ಔಚಿತ್ಯವನ್ನು ಎಷ್ಟೆಂದು ಹೇಳಬೇಕು!

೩. ಹಡಪ—ಈ ಶಬ್ದವು ೧೨ನೆಯ ಶತಮಾನಕ್ಕೆ ಮೊದಲು ಕನ್ನಡದಲ್ಲಿ 'ಅಡಪ' ಎಂಬ ಮೂಲ ರೂಪದಲ್ಲಿ ಬಳಕೆಯಲ್ಲಿತ್ತು. ನಾಗವರ್ಮನು (೧೧೪೫) ಶಬ್ದಸ್ಮೃತಿಯಲ್ಲಿ 'ಅಡಪವಳಂ' ಎಂಬುದರ ಪ್ರಾಚೀನ ಪ್ರಯೋಗವನ್ನು ಉದಹರಿಸಿದ್ದಾನೆ. ಕೇಶಿರಾಜನು (೧೨೬೦) ಶಬ್ದಮಣಿದರ್ಪಣದಲ್ಲಿ ಇದೇ ಉದಾಹರಣವನ್ನೇ (ಸ್ವಲ್ಪ ಬೇರೆ ರೀತಿಯಲ್ಲಿ) ಕೊಟ್ಟಿರುವನು. ಆದರೂ 'ಅಡಪವಳ' ಎಂಬಂತೆ, ಇದೇ ಅರ್ಥದಲ್ಲಿ 'ಅಡಪಿಗ' ಎಂಬ ಮಾತೂ ಕೇಶಿರಾಜನ ಕಾಲದಲ್ಲಿ ರೂಢಿಯಲ್ಲಿದ್ದಿತೆಂದು, ಆತನು ಇಗ ಪ್ರತ್ಯಯಕ್ಕೆ ಕೊಟ್ಟಿರುವ ಚಾಮರಿಗಂ, ಅಡಪಿಗಂ ಎಂಬ ಮುಂತಾದ ಉದಾಹರಣಗಳಿಂದ ಗೊತ್ತಾಗುತ್ತದೆ. ಕೇಶಿರಾಜನು ವೈಯಾಕರಣ; ಪೂರ್ವಪರಂಪರಾಭಿಮಾನಿ. ಆದುದರಿಂದ ಆತನು 'ಅಡಪಿಗ' ಎಂಬ ರೂಪವನ್ನು ಮಾತ್ರ ತನ್ನ ಗ್ರಂಥದಲ್ಲಿ ಕೊಟ್ಟಿರುವನಾದರೂ ಆತನ ಕಾಲದಲ್ಲಿ 'ಅಡಪಿಗ' ಎಂಬುದು 'ಹಡಪಿಗ' ಎಂಬುದಾಗಿ ಮಾರ್ಪಟ್ಟಿದ್ದಿತೆಂದು ಈಗ ನಿಶ್ಚಿತವಾಗಿ ಗೊತ್ತಾಗುತ್ತದೆ.

ಸುಮಾರಾಗಿ ಕೇಶಿರಾಜನ ಸಮಕಾಲೀನನಾದ ರಾಘವಾಂಕನು (೧೨೮೦ ?) ಹರಿಶ್ಚಂದ್ರ ಕಾವ್ಯದಲ್ಲಿ 'ಹಡಪಿಗ' ಎಂಬ ಮಾತನ್ನು ಬಳಸಿದ್ದಾನೆ (೭.೩೧) ರಾಘವಾಂಕನು ಕೇಶಿರಾಜನಿಗಿಂತಲೂ ಮೊದಲು ಕೆಲವು ವರುಷ ಬಾಳಿದ್ದನೆಂದೂ ಹೇಳುವುದುಂಟು. ಹಾಗಿದ್ದ ಪಕ್ಷದಲ್ಲಿ ಶಬ್ದಮಣಿದರ್ಪಣವು ತಲೆದೋರುವ ಮೊದಲೇ 'ಅಡಪಿಗ'ವು 'ಹಡಪಿಗ'ವಾಗಿರಬೇಕು. ಅಥವಾ ಕೇಶಿರಾಜನು ತನ್ನ ಕಾಲದಲ್ಲಿ ಜನರಾಡುವ ಮಾತಿನಲ್ಲಿದ್ದ 'ಹಡಪಿಗ' ಎಂಬ ಅಪಶಬ್ದರೂಪವನ್ನು ಪರಿಷ್ಕರಿಸಿ 'ಅಡಪಿಗ' ಎಂಬುದಾಗಿ ತನ್ನ ವ್ಯಾಕರಣದಲ್ಲಿ ಉದಹರಿಸಿರಬೇಕು. ಏಕೆಂದರೆ 'ಬೆರಳು' ಎಂಬುದು ಅಬದ್ಧ; 'ಬೆರಲ್' ಎಂದು ಲಕಾರಾಂತವಾಗಿಯೇ ಹೇಳಬೇಕೆಂದು ಆತನು ವಿಧಿಸಿದ್ದುಂಟು (ಸೂತ್ರ ೨೮.) ನಾಗವರ್ಮನು ನಿಯೋಗಾರ್ಥದಲ್ಲಿ 'ವಳ' ಪ್ರತ್ಯಯವನ್ನು ಹೇಳಿದ್ದು 'ಅಡಪವಳ' ಎಂಬುದು ಅದಕ್ಕೆ ಉದಾಹರಣವಾಗಿದೆ. ಕೇಶಿರಾಜನ ಕಾಲದಲ್ಲಿ 'ವಳ' ಪ್ರತ್ಯಯದಂತೆ 'ಇಗ' ಪ್ರತ್ಯಯವೂ ನಿಯೋಗಾರ್ಥದಲ್ಲಿ ವ್ಯವಹರಿಸಲಾರಂಭಿಸಿತು. ಅಡಪವಳವು ಅಡಪಿಗವಾಯ್ತು. ಜನಸಾಮಾನ್ಯರ ಬಾಯಲ್ಲಿ ಅಡಪ, ಅಡಪಿಗಗಳು ಹಡಪ, ಹಡಪಿಗ ಎಂದಾದುವು. ಅಕಾರವು ಹಕಾರವಾಗಿ ಮಾರ್ಪಟ್ಟ ಬೇರೆ ಕೆಲವು ಶಬ್ದಗಳೂ ನಮಗೆ ದೊರೆಯುವುವು. ಅಲಸಂದಿ ಹಲಸಂದಿ ; ಅಡದಿ= ಹಡದಿ ; ಅಡಬೆ= ಹಡಬೆ ಮುಂತಾದುವು ಇದಕ್ಕೆ ನಿದರ್ಶನ. ಇದೇ ರೀತಿಯಲ್ಲಿ ಅಡಪವು ರಾಘವಾಂಕ ಕೇಶಿರಾಜರ ಕಾಲದಲ್ಲಿ 'ಹಡಪ'ವೆಂದಾಗಿರಬೇಕೆಂದು ಕಂಡುಕೊಳ್ಳಬಹುದಾಗಿದೆ.

ಈ ಊಹೆಗೆ ಇನ್ನೂ ಒಂದು ಬಲವಾದ ಆಧಾರವು ಸಿಕ್ಕುತ್ತದೆ. ೧೨—೧೩ನೆಯ ಶತಮಾನದ ಮರ್ಹಾಟಿ ಸಾಹಿತ್ಯದಲ್ಲಿ 'ಹಡಪ' ಎಂಬ ಪದಪ್ರಯೋಗಗಳು ದೊರೆಯುತ್ತವೆ. ಮರ್ಹಾಟಿ ಕವಿಗಳು 'ಹಡಪ' ಶಬ್ದವನ್ನು 'ಹಡಪ' 'ಹಡಪಾ,' 'ಹಡಪು' ಎಂದು ಬಗೆಬಗೆಯಾಗಿ ಉಪಯೋಗಿಸಿದ್ದಾರೆ. ಮರ್ಹಾಟಿಯ ಆದಿಗ್ರಂಥಕಾರರೆನಿಸಿದ ಮಹಾನುಭಾವರ (೧೨ನೆಯ ಶತಮಾನದ ಕೊನೆಯ ಭಾಗ) ಸಾಹಿತ್ಯದಲ್ಲಿ ಈ ಶಬ್ದವು ಮೊದಲು ಕಾಣಿಸಿಕೊಂಡಿದೆ. 'ತರೀ ಮ್ಹಣೇ ಹಡಪು ಕವಣಾಚಾ' ? ಈ ಹಡವು ಅದಾರದು ? (ಮಹಾನುಭಾವ ಭಾಸ್ಕರಕವಿ). ೧೩ನೆಯ ಶತಮಾನದ ಜ್ಞಾನೇಶ್ವರನ ಗ್ರಂಥದಲ್ಲಿಯೂ ಈ ಮಾತು ಬಂದಿದೆ.

ಜ್ಞಾನೇಶ್ವರನ ಜ್ಞಾನೇಶ್ವರಿಯು ಮರ್ಹಾಟಿಯಲ್ಲಿರುವ ಅಮೃತ ಸಮನಾದ ಮಹಾಗ್ರಂಥ. ಮರ್ಹಾಟಿಗೆ ಅಮರ ಪದವಿಯನ್ನು ದೊರಕಿಸಿಕೊಟ್ಟ ಅಪೂರ್ವಗ್ರಂಥ. ಜ್ಞಾನೇಶ್ವರಿಯ ಮಾತು ಬಂದೊಡನೆ ಅದಕ್ಕೆ ತಲೆಬಾಗಿ ಅದರ ವಿಷಯದಲ್ಲಿ ಆದರ, ಪ್ರೀತಿಯನ್ನು ಸೂಚಿಸದೆ (ಸ್ವಲ್ಪ ವಿಷಯಾಂತರವೆನಿಸಿದರೂ), ಮುಂದೆ ಸಾಗುವುದು

ಅದನ್ನೋದಿದ ಯಾರಿಗೂ ಸಾಧ್ಯವಿಲ್ಲ. ಅದಂತಿರಲಿ; ಜ್ಞಾನೇಶ್ವರಿಯಲ್ಲಿ 'ಹಡಪ' ಎಂಬ ಶಬ್ದವು ಕಾಣಿಸಿಕೊಂಡಿರುವ ಸ್ಥಳದಲ್ಲಿ ಇನ್ನೂ ಕೆಲವು ಶಬ್ದಗಳು ಕನ್ನಡದ ವರ್ಚಸ್ಸನ್ನು ತೋರಿಸುವಂತಹವುಗಳಿರುವುದರಿಂದ ಸ್ವಲ್ಪ ಹೆಚ್ಚು ಭಾಗವನ್ನು ಉದ್ಧರಿಸಲಾಗಿದೆ—

ಭಗವದ್ಗೀತೆಯ ೧೩ ನೆಯ ಅಧ್ಯಾಯದಲ್ಲಿ ಬಂದಿರುವ 'ಆಚಾರ್ಯೋಪಾಸನಂ' ಎಂಬ ಮಾತಿನ ವಿವರಣವನ್ನು ಮಾಡುವಾಗ ಶ್ರೀ ಜ್ಞಾನೇಶ್ವರನು ಗುರುಭಕ್ತಿಯ ರೀತಿಯನ್ನು ಹೀಗೆ ವರ್ಣಿಸಿದ್ದಾನೆ:

> **ಪಡಿಗಾ** ಮೀಚ | **ಹಡಪ** ಮೀ **ಓಳಗೇ** ನ | ಮೀಚ **ಉಗಾಳು** (ಉಗಳು) ಘೇಯಿನ | **ಉಳಿಗ** (ಊಳಿಗ) ಕರೀನ ಮೀ | ಅಂಘೋಳಿಚೇ |
> ಹೋಯಿನ ಗುರೂಚೇ ಆಸನ | . . . ಮೀಚಿ **ಓಗರೀನ** ಉಪಹಾರು |
> ಜೇ ವೇಳಿ ದೇವೊ **ಆರೋಗಿತೀ** |

೧೩. ೪೧೮—೪೨೩.

ಗುರುದೇವನಿಗೆ ನಾನೇ ಪಾತ್ರೆ—ಪಡಗವಾಗುವೆನು; ನಾನೇ **ಹಡಪಿಗನಾಗಿ ಓಲಗಿಸುವೆನು**; ನಾನೇ ತಂಬುಲ(ಉಗುಳನ್ನು) ಧರಿಸುವೆನು; ಸ್ನಾನದ **ಊಳಿಗ** ಮಾಡುವೆನು; **ಆರೋಗಿಸುವ** ಕಾಲದಲ್ಲಿ ನಾನೇ **ಓಗರಿಸುವೆನು** (ಓಗರವನ್ನು ಬಡಿಸುವೆನು).

ಹಡಪದೊಡನೆ ಬಂದಿರುವ ಪಡಗ, ಓಲಗಿಸು, ಉಗುಳು, ಊಳಿಗ, ಆರೋಗಣೆ, ಓಗರ ಈ ಶಬ್ದಗಳೂ ನೆನಪಿಡುವಂತಹವುಗಳಾಗಿವೆ. ಇವುಗಳಲ್ಲಿ ಆರೋಗಣೆ, ಓಗರ ಎಂಬಿವು ಅಚ್ಚಕನ್ನಡದುವೆಂದು ಹೇಳುವುದಕ್ಕಾಗದಿದ್ದರೂ, ೧೨—೧೪ನೆಯ ಶತಮಾನದ ಕನ್ನಡ ಮತ್ತು ಮರ್‍ಹಾಟಿ ಸಾಹಿತಿಗಳ ಪರಿಭಾಷೆಯಲ್ಲಿರುವ ಒಂದುತನವು ಮಾತ್ರ ಸ್ಪಷ್ಟವಾಗಿ ಕಂಡುಬರುತ್ತದೆ.

ಅಡಪ (ಹಡಪ) ಶಬ್ದವು ಅಚ್ಚಕನ್ನಡದ್ದೆಂದು ಹೇಳಲು ಅಡ್ಡಿ ತೋರುವುದಿಲ್ಲ. ಏಕೆಂದರೆ ಇದಕ್ಕೆ ಕನ್ನಡದಿಂದಲೇ ವ್ಯುತ್ಪತ್ತಿಯನ್ನು ಹೇಳಬಹುದಾಗಿದೆ. ಅಡಕಿ (ವಸ್ತುಗಳನ್ನು) ಇಡುವಂತಹದು—ಅಡಪ; ಅಡಪ (ಹಡಪ)ವೆಂದರೆ ಸಂಗ್ರಹದ ಚೀಲ; ಹಸುಬೆ (ಪಸುಂಬೆ); ಸಂಚಿ (ಚಂಚಿ); 'ಅಡಪ' ಎಂಬ ಮಾತು ಕನ್ನಡದಂತೆ ತಮಿಳು, ತೆಲುಗು, ತುಳು, ಮಲೆಯಾಳ ಭಾಷೆಗಳಲ್ಲೂ ಉಂಟು. ಆದುದರಿಂದ ಇದು ದ್ರಾವಿಡಭಾಷಾ ವರ್ಗಕ್ಕೆ ಸೇರಿದ ಶಬ್ದವೆಂದು ನಿರ್ಧರಿಸಬಹುದಾಗಿದೆ.

ಮರ್‍ಹಾಟಿಯಲ್ಲಿ ಅಡಪವು ಹಡಪವೆಂದು ಬಳಕೆಯಲ್ಲಿರುವಂತೆ 'ಅಡವು' (ಅಡಪು, ಅಡಹು) ಎಂಬುದೂ 'ಹಡಪ' ಎಂಬುದಾಗಿ ರೂಢಿಯಲ್ಲಿದೆ. ಅಡವು ಎಂಬುದಕ್ಕೆ ಕನ್ನಡದಲ್ಲಿರುವ ಒತ್ತೆ, ಈಡು, ಜಾಮೀನು, ಓಲೆಯಿಡುವ ವಸ್ತು ಎಂಬೀ ಬಗೆಯ

ಅರ್ಥದಲ್ಲಿಯೇ ಮರ್ಹಾಟಿಯಲ್ಲಿ 'ಹಡಪ' ಎಂಬ ಇನ್ನೊಂದು ಶಬ್ದವಿದ್ದುದನ್ನು ಮಹಾರಾಷ್ಟ್ರ ಶಬ್ದಕೋಶದಿಂದ ಮನಗಾಣಬಹುದು. ತೊಂದರೆ ಎಂಬರ್ಥದ 'ಅಡ್ಡಿ' ಶಬ್ದದ ಇನ್ನೊಂದು ರೂಪವು ಮರ್ಹಾಟಿಯಲ್ಲಿ 'ಹಡದ' 'ಹಡದಾ' ಅಥವಾ 'ಹಡದೇ' ಎಂಬಲ್ಲಿ ನಮಗೆ ಗೋಚರವಾಗುತ್ತದೆ. ಈ ಪದಕ್ಕೆ ಮಹಾರಾಷ್ಟ್ರ ಶಬ್ದಕೋಶಕಾರರು 'ತೊಡಕು, ಅಡ್ಡಿ, ಬಂಧನ, ತೊಂದರೆ, ತ್ರಾಸು, ಕಷ್ಟ' ಎಂದು ಮುಂತಾಗಿ ಅರ್ಥ ಹೇಳುತ್ತಾರೆ.

ಕನ್ನಡದಂತೆ ಮರ್ಹಾಟಿಯಲ್ಲಿಯೂ ಹಡಪ ಶಬ್ದವು ಬರಬರುತ್ತ ೧೬-೧೭ನೆಯ ಶತಮಾನದಿಂದ ಮೂಲೆಗುಂಪಾದುದನ್ನು ಕಾಣಬಹುದು.

೪. ಅಡ್ಡ—ಇದು ಕನ್ನಡ, ತಮಿಳು, ತುಳು, ತೆಲುಗು ಮೊದಲಾದ ದ್ರಾವಿಡ ವರ್ಗದ ಭಾಷೆಗಳಲ್ಲಿರುವುದು. ಸಂಸ್ಕೃತದಲ್ಲಿ ಇದಕ್ಕೆ ಹತ್ತಿರದ ಹೊಂದಿಕೆಯ ನುಡಿಯಿಲ್ಲ; 'ಅಡ್ಡ,' ಎಂಬುದು ಸಂಸ್ಕೃತಜನ್ಯವೆಂದು ಸಾಧಿಸಿದ್ದು ಕಂಡುಬರುವುದಿಲ್ಲ.

ಆದರೂ ಮರ್ಹಾಟಿಯಲ್ಲಿ ಅಡ್ಡಶಬ್ದದ ಬಗೆಬಗೆಯ ಪ್ರಯೋಗಗಳು ಹೇರಳವಾಗಿವೆ. ಅಡ್ಡವು 'ಅಡ' ಅಥವಾ 'ಆಡ' ಎಂಬ ರೂಪದಲ್ಲಿ ಮರ್ಹಾಟಿಯಲ್ಲಿ ವ್ಯವಹರಿಸುತ್ತಲಿದೆ. ಇದರ ವಿಪುಲ ಪ್ರಯೋಗಗಳನ್ನು ನೋಡಿದರೆ, ಅಡ್ಡವು ಮರ್ಹಾಟಿಯ ಜೀವಾಳ ನುಡಿಯಾದಂತೆ ಆಗಿದೆ! 'ಮಹಾರಾಷ್ಟ್ರ ಶಬ್ದಕೋಶದ ಸಂಪಾದಕವರ್ಗದವರು ಅಡ—ಆಡ (ಅಡ್ಡ) ಎಂಬುದು ಕನ್ನಡದಿಂದ ಮರ್ಹಾಟಿಯವರು ಎತ್ತಿಕೊಂಡ ಮಾತೆಂದು ಸ್ಪಷ್ಟವಾಗಿ ಒಪ್ಪಿಕೊಂಡುಬಿಟ್ಟಿದ್ದಾರೆ. 'ಕನ್ನಡ ಅಡ್ಡಶಬ್ದದಿಂದ ಸಿದ್ಧವಾದ ಹಲವು ಸಾಮಾಸಿಕ ಪದಗಳು' ಮರ್ಹಾಟಿಯಲ್ಲಿದ್ದುದನ್ನು ಕೋಶದಲ್ಲಿ ವಿವರಿಸಿದ್ದಾರೆ; ದೊಡ್ಡ ಆಕಾರದ (double crown) ಸುಮಾರು ೫-೬ ಪುಟದಷ್ಟು ಸ್ಥಳವನ್ನು 'ಅಡ್ಡ' ಶಬ್ದದಿಂದಾದ ಬೇರೆಬೇರೆ ಪದಗಳು ವ್ಯಾಪಿಸಿವೆ. 'ಆಡವಾಟ, ಆಡಮಾರ್ಗ' (ಅಡ್ಡದಾರಿ), 'ಆಡಕಥಾ'; 'ಆಡಕಾಠಿ' (ಅಡ್ಡಿ); 'ಅಡಕಾಮು' (ಅಡ್ಡಕೆಲಸ); 'ಅಡಭಿಂತ' (ಅಡ್ಡಗೋಡೆ); 'ಅಡಗಿರ್ಹಾಯಿಕ' (ಅಡ್ಡಗಿರಾಕಿ); 'ಅಡಕಣೇ' (ತೊಡಕು); 'ಅಡಗವಿಣೇ' (ಅಡಕು; ರಚಿಸು; ಸರಿಯಾಗಿ ಇಡು); 'ಆಡಚಣ' (ಅಡ್ಡಿ, ತೊಂದರೆ); 'ಅಡವಾತಿಡವಾ' (ಅಡ್ಡತಿಡ್ಡ); 'ಅಡಣೂಕ' (ಅಡ್ಡಿ); 'ಅಡಣ' (ಅಡ್ಡಣ); 'ಅಡಣಿ' (ಅಡ್ಡಣಿಗೆ) ಇವೇ ಮುಂತಾದುವು ಕೆಲವು ಮಾದರಿಯ ನುಡಿಗಳಾಗಿವೆ.

'ಅಡ್ಡಣಿಗೆ' ಎಂಬ ಮಾತು ಕನ್ನಡದ ಪ್ರಾಚೀನ ಗದ್ಯಗ್ರಂಥವೆಂದು ಬಲ್ಲಿದರ ಕುತೂಹಲ ಆದರಗಳಿಗೆ ಕಾರಣವಾದ 'ವಡ್ಡಾರಾಧನೆ'ಯಲ್ಲಿ ಬಂದಿದೆ (ಕ.ಸಾ.ಪ. ಜೂನ ೪೧). ಇದು ೭ನೆಯ ಶತಮಾನದ ಗ್ರಂಥವೆಂದು ಕೆಲವು ವಿದ್ವಾಂಸರ

ಮತವಿದೆ. ಅದು ಏನೆ ಇದ್ದರೂ ಹತ್ತನೆಯ ಶತಮಾನಕ್ಕೆ—ಎಂದರೆ ಮರ್ಹಾಟಿಯು ಇನ್ನೂ ಕಣ್ಣುಬಿಟ್ಟು ತಲೆಯೆತ್ತುವುದಕ್ಕೆ ಮೊದಲು ಈ ಗ್ರಂಥವು ಹುಟ್ಟಿದೆಯೆಂಬಲ್ಲಿ ಏನೂ ಸಂದೇಹವಿಲ್ಲ. ಅಡ್ಡಣಿಗೆಯ ಮೇಲೆ ತಳಿಗೆಯನ್ನಿಟ್ಟು ಊಟಮಾಡುವ ಪರಿಪಾಠವು ಕರ್ನಾಟದಲ್ಲಿ ಬಹಳ ಪುರಾತನಕಾಲದಿಂದಲೂ ಇದ್ದುದು ಕಂಡುಬರುತ್ತದೆ. ವಡ್ಡಾರಾಧನೆಯ ವರ್ಣನೆಯಿಂದ ಜೈನರಲ್ಲಿ ಈ ಪದ್ಧತಿಯಿದ್ದುದು ಸ್ಪಷ್ಟವಾಗುತ್ತದೆ. ಅದರಂತೆ ವೀರಶೈವರಲ್ಲಿ ಈ ಪದ್ಧತಿಯಿದ್ದುದನ್ನು ಈಗಲೂ ಕಾಣಬಹುದು. ಬಸವಪುರಾಣದಲ್ಲಿ ಅಡ್ಡಣಿಗೆಯು ಬಂದಿದೆ.

ಜ್ಞಾನೇಶ್ವರಿಯಲ್ಲಿ 'ಇಂದ್ರ ಧನುಷ್ಯಾಚಿಯೇ ಅಡಣೀ' ಎಂಬ ಪ್ರಯೋಗವು ಬಂದಿದೆ. ಏಕನಾಥಾದಿಗಳು ಈ ಪದವನ್ನು ಬಳಸಿದ್ದಾರೆ. 'ಅಡಣೀವರೀ ಸೋನ್ಯಾಚೇ ತಾಟ' ಎಂಬ ಮಾತಿನಿಂದ ಮಹಾರಾಷ್ಟ್ರದಲ್ಲಿಯೂ ಊಟದ ತಳಿಗೆಯನ್ನಿಡುವುದಕ್ಕೆ ಅಡ್ಡಣಿಗೆಯನ್ನು ಉಪಯೋಗಿಸುತ್ತಿದ್ದರೆಂದು ಕಂಡುಬರುತ್ತದೆ. ಆದರೂ ಅದು ಮಹಾರಾಷ್ಟ್ರದ ವೈಶಿಷ್ಟ್ಯವಲ್ಲ. 'ಅಡಣೀವರಚಾ' (ಅಡ್ಡಣಿಗೆಯ ಮೇಲಿನವ) ಎಂಬುದಕ್ಕೆ ಮರ್ಹಾಟಿಯಲ್ಲಿ ಒಂದು ವಿಶೇಷ ಅರ್ಥವು ಪ್ರಾಪ್ತವಾಗಿದೆ. ಅಡ್ಡಣಿಗೆಯ ಮೇಲೆ (ದೇವರ ಜಗಲಿಯ ಮೇಲೆ) ಶಂಖವನ್ನಿಡುವುದು ವಾಡಿಕೆ. ಆದುದರಿಂದ 'ಅಡಣಿ ವರಚಾ' (ಅಡ್ಡಣಿಗೆ ಮೇಲಣವ) ಎಂದರೆ ಶಂಖ, ಮೂರ್ಖ; 'ಮಾದೇವರ ಮುಂತಣಾತ' ಎಂಬಂತೆ!

'ಅಡ್ಡಣಿಗೆ' ಎಂಬುದು ಮರ್ಹಾಟಿಯು ಪ್ರೌಢಸ್ಥಿತಿಗೆ ಬರುವ ಮೊದಲಿನಿಂದಲೇ ಕನ್ನಡಸಾಹಿತ್ಯದಲ್ಲಿ ಬಳಕೆಯಲ್ಲಿದ್ದುದು ನಿಜವಿದ್ದರೂ ಮರ್ಹಾಟಿಯಲ್ಲಿರುವ 'ಅಡಣ' ಮತ್ತು 'ಅಡಣಿ' ಎಂಬುವು ಕನ್ನಡದಲ್ಲಿ ಬಳಕೆಯಲ್ಲಿರುವ 'ಅಡ್ಡಣಿಗೆ' ಎಂಬುದಕ್ಕಿಂತ ಪ್ರಾಚೀನ ಸ್ವರೂಪವನ್ನು ಸೂಚಿಸುತ್ತಲಿವೆಯೆಂದು ಒಪ್ಪಿಕೊಳ್ಳಬೇಕಾಗುತ್ತದೆ. ಮಾಡ—ಮಾಡಿ—ಮಾಳಿ—ಮಾಳಿಗೆ ಎಂಬೀ ಬಗೆಯ ಹಲವು ನುಡಿಗಳಲ್ಲಿರುವ ಕೊನೆಯ ಗೆ ಪ್ರತ್ಯಯವು ಬಿದ್ದು ಹೋದರೂ ಅರ್ಥಕ್ಕೆ ಬಾಧೆಯಿಲ್ಲ. ಅಲ್ಲದೆ 'ಗೆ' ಪ್ರತ್ಯಯವು ಮುಂದೆ ಕಾಲಕ್ರಮದಲ್ಲಿ ಸಂಸ್ಕೃತದಲ್ಲಿರುವ 'ಕ' ದಂತಹ ಒಂದು ಸ್ವಾರ್ಥಪ್ರತ್ಯಯದ ಹಾಗೆ ಬಂದು ಸೇರಿಕೊಂಡಿತೆಂದು ಕಂಡುಬರುತ್ತದೆ. ಆದುದರಿಂದ 'ಅಡಣ' (frame), ಅಡಣಿ ಎಂಬಿವು ಅಡ್ಡಣಿಗೆ ಎಂಬುದರ ಮೊದಲ ಅವಸ್ಥೆಯ ರೂಪಗಳೆಂದು ಊಹಿಸಬೇಕಾಗುತ್ತದೆ. 'ಮಾಳಿಗೆ' ಎಂದು ಇಂದಿನ ಕನ್ನಡದಲ್ಲಿ ರೂಢವಿರುವ ಶಬ್ದದ ಹಿಂದಿನ 'ಮಾಡಿ' (ಮಾಡ—ಮಾಳ) ರೂಪವು ಇನ್ನೂ ಮರ್ಹಾಟಿಯಲ್ಲುಂಟು. ಕನ್ನಡದಲ್ಲಿ ಬಳಕೆಯಲ್ಲಿರುವ ಮಾತುಗಳ ಆರಂಭದ ಹಳೆಯ ರೂಪಗಳು ಮರ್ಹಾಟಿಯಲ್ಲಿ ಹುದುಗಿಕೊಂಡಿರುವುದು ನಮ್ಮ ಅನುಭವಕ್ಕೆ ಬರುತ್ತಿದೆ.

೫. **ಕೋಡಗ**—ಕೋಡಗ ಎಂದರೆ ಮಂಗ; ಕೋಡು ಎಂದರೆ ಮರದ ಕೊಂಬೆ; ಶಾಖೆ. ಕೋಡು—ಕೊಂಬೆಗಳ ಮೇಲೆ ಇರುವ ಪ್ರಾಣಿ ಕೋಡಗ. ಸಂಸ್ಕೃತ ದೊಳಗಿನ ಶಾಖಾ-ಮೃಗವೆಂಬದು ಇದಕ್ಕೆ ಸಮಾನಾರ್ಥಕವಾದ ಶಬ್ದ. ಆದಿಪಂಪನು ವಿಕ್ರಮಾರ್ಜುನ ವಿಜಯದಲ್ಲಿ ಹಲವೆಡೆಗಳಲ್ಲಿ 'ಕೋಡಗಗಟ್ಟಂ ಕಟ್ಟಿ' ಎಂಬ ಮಾತನ್ನು ಪ್ರಯೋಗಿಸಿದ್ದಾನೆ. (೧೦ನೆಯ ಶತಮಾನ), ಕೋಡಗದ ಕಟ್ಟಿಗೆ (ಬಿಗಿತಕ್ಕೆ) ಈಗ ಉತ್ತರ ಕರ್ಣಾಟದವರು 'ಮಂಗನ ಮಲಕು' ಎಂದು ಹೇಳುವರು. ಪಂಪನು ಬಳಸಿದ 'ಕೋಡಗ' ಶಬ್ದವು ಮಂಗನೆಂಬರ್ಥದ್ದೆಂಬಲ್ಲಿ ಸಂದೇಹವೆ ಇಲ್ಲ. ಕನ್ನಡಸಾಹಿತ್ಯಪರಿಷತ್ತಿನ ಮೇಲುನೋಟದಲ್ಲಿ ಪ್ರಕಟವಾದ ಪಂಪಭಾರತದ ಸಂಪಾದಕರು ಇದೇ ಅರ್ಥವನ್ನು ಹೇಳುತ್ತಾರೆ.

ಮರ್ಹಾಟಿ ಸಾಹಿತ್ಯದಲ್ಲಿ ಅಲ್ಲದೆ, ಇಂದಿನ ಬಳಕೆಯ ಮಾತಿನಲ್ಲೂ 'ಕೋಡಗ' ಶಬ್ದವು ಕಾಣಿಸಿಕೊಳ್ಳುತ್ತದೆ. ಮರಾಠಿಗರ ಬಾಯಲ್ಲಿ ಅದು 'ಕೋಡಗಾ' ಎಂದು ಸ್ವಲ್ಪ ಬದಲಾವಣೆಯನ್ನು ಹೊಂದಿದೆ. ಇಷ್ಟರಿಂದಲೆ ಅದು ಕನ್ನಡ ಕೋಡಗದಿಂದ ಭಿನ್ನವಾದುದೆಂದು ಪ್ರತಿಪಾದಿಸುವ ಸಾಹಸವನ್ನು ಯಾರೂ ಮಾಡರು. ಮರ್ಹಾಟಿ ಕೋಶಗಳಲ್ಲಿಯೂ, ಇದು ಕನ್ನಡದಿಂದ ಎತ್ತಿಕೊಂಡುದೆಂದು ಸೂಚಿಸಿದ್ದಾರೆ.

ಕೋಡಗ (ಕ್ವಾಡಗವೆಂದು ಇಂದಿನ ಗ್ರಾಮ್ಯರೂಪ) ಎಂದರೆ ನಾಣಿಲಿ (ನಿರ್ಲಜ್ಜ); ಎಗ್ಗಿಲ್ಲದವ; ಕುಚೇಷ್ಟೆಗಳಲ್ಲಿ ಆನಂದಗೊಳ್ಳುವ, ಅದಕ್ಕಾಗಿ ಆಗಾಗ ಬೈಯಿಸಿಕೊಳ್ಳುವ ಮನುಷ್ಯಪ್ರಾಣಿ; ಎಂದು ಕನ್ನಡದಲ್ಲಿ ಅದಕೊಂದು ವಿಶಿಷ್ಟಾರ್ಥವುಂಟು; ಮರ್ಹಾಟಿಯಲ್ಲಿಯೂ ಸರಿಯಾಗಿ ಇದೇ ಭಾವವುಂಟು. ಅಲ್ಲದೆ ಆ ಭಾಷೆಯಲ್ಲಿ ಇದರಿಂದ ಇನ್ನೂ ಕೆಲವು ಸಾಧಿತಶಬ್ದಗಳೂ ತಲೆದೋರಿವೆ. 'ಲತಕೋಡಗ್ಯಾಚೀ ಬಲಾಯದೂರ' ಎಂಬ ಗಾದೆಯಿದೆ. ಇದು ಕನ್ನಡದ ಮಾತಾದರೂ ಮರ್ಹಾಟಿಯಲ್ಲಿ ಈಗಲೂ ಇರುವಷ್ಟು ಇದರ ವಿವಿಧ ಪ್ರಯೋಗಗಳು ಕನ್ನಡದಲ್ಲಿ ಮಾತ್ರ ಇಲ್ಲ!

೬. **ಅದಟ**—ಇದು ಕನ್ನಡದ ಹಳೆಯ ಕಾವ್ಯಗಳಲ್ಲಿ ದೊರೆವುದಾದರೂ ಇಂದು ಬಳಕೆಯಲ್ಲಿಲ್ಲ. 'ಧರೆಯೊಳ್ ವೀರದ ಪೆಂಪಿನ ಮುರಹರನಿಂದೆ ಐವಡಿ ನೆಗಳ್ತೆಯ ಅದಟರ ಭೀಮಂ' (ಶ. ಮ. ದ ಪು. ೫೬) ಎಂಬೀ ಬಗೆಯ ಪ್ರಯೋಗಗಳು ನಡುಗನ್ನಡದಲ್ಲಿ ಹೇರಳವಾಗಿವೆ. 'ಅದಟಂ ಪುಟ್ಟಿದನ್' (ಭಾ. ೫, ೨೯) ಎಂದು ಪಂಪನಲ್ಲಿಯೂ ಈ ಪ್ರಯೋಗವಿದೆ. ಮರ್ಹಾಟಿ ಹಳೆಯ ಸಾಹಿತ್ಯದಲ್ಲಿಯೂ ಈ ಪದವು ಕಾಣಿಸಿಕೊಳ್ಳುತ್ತದೆ. 'ಭಗವಂತ ಮಹಾ ಅತುರ್ಬಳೀ | **ಅದಟ** ದೈತ್ಯಾತೇ ನಿರ್ದಾಳೀ ||' —ಏಕನಾಥನ ಭಾಗವತ. ಮಹಾಪರಾಕ್ರಮಶಾಲಿಯಾದ ಭಗವಂತನು ಅದಟರಾದ

ದೈತ್ಯರನ್ನು ನಿರ್ಮೂಲವಾಡಿದನು; ಎಂಬಲ್ಲಿ ಅದಟ ಶಬ್ದವನ್ನು ಉಪಯೋಗಿಸಿದ್ದಾಗಿದೆ.

೭. ಅಗ್ಗಳ—ಹಳಗನ್ನಡ ನಡುಗನ್ನಡದ ಕಾವ್ಯಗಳಲ್ಲಿ ಹೇರಳವಾಗಿ ಬಳಕೆಯಲ್ಲಿ ಇದ್ದ ಇನ್ನೊಂದು ಪದವಿದು.

ಮರ್ಹಾಟಿಯಲ್ಲಿ ಅವರ ಉಚ್ಚಾರ ಸೌಕರ್ಯಕ್ಕಾಗಿ ಇದು 'ಆಗಳಾ' ಎಂದು ಮಾರ್ಪಟ್ಟಿದೆ. ಮರ್ಹಾಟಿಯ ಹಳೆಯ ಸಾಹಿತ್ಯದಲ್ಲಿ ಅಡಿಗಡಿಗೂ ಕಾಣಿಸಿಕೊಳ್ಳುವುದು. 'ಆಗಳೇ ಚಾಳೀಸಗಡ' (ಶ್ರೇಷ್ಠವಾದ ಚಾಳೀಸಗಡವೆಂಬ ಕೋಟೆ); 'ಆಗಳೀ ಕಾಶೀ' (ಹೆಚ್ಚಿನ ಕಾಶೀಪಟ್ಟಣ); 'ಅಗ್ರಾಕಡುನಿ ಇಕ್ಷುರಸ| ಮುಳಾಂಯೇತಾ ಆಗಳಾ ಸುರಸ||' (ಕಬ್ಬಿನ ರಸವು ಮೂಲದ ಕಡೆಗೆ ಬಂದಂತೆ ಬಹಳ ಸವಿಯಾಗುತ್ತದೆ); 'ಆಗಳೀ ಸುಂದರಾ ಪತಿವ್ರತಾರತ್ನ' ಎಂಬಿವೇ ಮೊದಲಾದ ಕಡೆಗಳಲ್ಲಿ ಉಪಯೋಗಿಸಲ್ಪಟ್ಟಿರುವ 'ಆಗಳಾ' ಎಂಬುದು ಕನ್ನಡ ಕಾವ್ಯಗಳಲ್ಲಿ ಕಾಣಿಸಿಕೊಳ್ಳುವ 'ಅಗ್ಗಳ' ಎಂಬುದಕ್ಕಿಂತ ಬೇರೆಯಲ್ಲ.

೮. ಅಳಿಪು—ಕನ್ನಡದ ಪ್ರಾಚೀನ ಕಾವ್ಯಗಳಲ್ಲಿ ಹಲವೆಡೆಗೆ ಬಂದಿರುವ ಈ ಮಾತು ಮರ್ಹಾಟಿಯ ಪುರಾತನ ಕಾವ್ಯಗಳಲ್ಲಿಯೂ ಕಣ್ಣಿಗೆ ಬೀಳುತ್ತದೆ. 'ಆಳೀ ಘೇವೋನಿ ಜನ್ಮ ಆಲೇ| ಕಿತ್ಯೇಕ ಪ್ರಾಣೀ|' (ಅಳಿಪು, ಆಸೆಯೊಡನೆಯೆ ಎಷ್ಟೋ ಪ್ರಾಣಿಗಳು ಜನ್ಮತಾಳುತ್ತವೆ) ಎಂಬಲ್ಲಿ ಶ್ರೀ ರಾಮದಾಸನು 'ಆಳಿ' ಎಂಬುದನ್ನು ಅಳಿಪು (ಆಸೆ) ಎಂಬ ಅರ್ಥದಲ್ಲಿಯೇ ಉಪಯೋಗಿಸಿರುವನೆಂದು ನಿರ್ಧರಿಸಬಹುದಾಗಿದೆ. 'ಜೇ ಆಳಿ ಕರೌಸಿ ಮಾಗೇ ಜೇವಣ' ಎಂದು ಮಹಾನುಭಾವ ಗ್ರಂಥಗಳಲ್ಲಿ ದೊರೆವ ಒಂದು ಪ್ರಯೋಗವಿದೆ.

ಕನ್ನಡದಲ್ಲಿರುವ 'ಪು' ಎಂಬ ಪ್ರತ್ಯಯವು ಮಾತ್ರ ಮರ್ಹಾಟಿಯಲ್ಲಿಲ್ಲ. ಮರ್ಹಾಟಿಯಲ್ಲಿ 'ಅಳಿ' (ಆಳಿ) ಎಂಬುದನ್ನಷ್ಟೇ ಬಳಸಿದುದು ಗಮನಿಸತಕ್ಕ ಮಾತಾಗಿದೆ. ಆದರೂ ಆಳಕಾ, ಆಳಂಕಾ ಅಥವಾ ಆಳುಕಾ ಎಂಬ ಇನ್ನೊಂದು ಪದವು ಅಳುಪು ಎಂಬ ಅರ್ಥದಲ್ಲಿ ಮರ್ಹಾಟಿಯಲ್ಲಿದೆ. 'ಅಳತೇಪಣಾ' ಎಂದರೆ ಆಸಕ್ತಿ; 'ಆಳತುವಾ' ಎಂದರೆ ಆಸಕ್ತ, ಲಂಪಟ, ಲೋಭಿ; ಈ ಅರ್ಥದ ಮಾತುಗಳು ಬಳಕೆಗೆ ಬಂದಿವೆ. 'ಕೈಸೀ ಸ್ವಸುಖಾಜೀ ಅಳುಕಿ (ಆಳುಕಿ)' ಸ್ವಸುಖದ ಅಳುಪು (ಆಸೆ) ಹೇಗಿದೆ? ಎಂಬಲ್ಲಿ ಅಳುಕಿ ಎಂದರೆ ಆಸೆ, ಲೋಭ ಎಂಬರ್ಥವೇ ಸರಿಹೋಗುವುದು. ಮರ್ಹಾಟಿ ಶಬ್ದಕೋಶಕಾರರೂ ಈ ಪದವನ್ನು ಅಳುಪಿನೊಂದಿಗೆ ತೂಗಿ, ಇದು ಕನ್ನಡದಿಂದಲೆ ಬಂದ ಮಾತಾಗಿರಬೇಕೆಂದು ನಿರ್ಧರಿಸಿದ್ದಾರೆ.

ಶಂ. ಬಾ. ಜೋಶಿ.

# ಕಾವ್ಯಾವಲೋಕನ

**ಗೀತಾಗಾಂಭೀರ್ಯ ಎಂಬ ಶ್ರೀ ಕೃಷ್ಣನ ಸಮಾಜಶಾಸ್ತ್ರ**—ಲೇಖಕರು : "ಶ್ರೀರಂಗ"; ಪ್ರಕಾಶಕರು : ರಂಗಮಂಗ ಪ್ರಕಾಶನ, ಧಾರವಾಡ; ಮೊದಲ ಮುದ್ರಣ ೧೯೪೧ ; ಡೆಮ್ಮಿ ಅಷ್ಟ. ೧೨ + ೨೪೮ + ೮೪ ; ಬೆಲೆ, ಸಾದಾ ರೂ. ೨–೦–೦, ಕ್ಯಾಲಿಕೊ ೨–೮–೦.

ಇತ್ತೀಚೆಗೆ ಭಗವದ್ಗೀತೆಯ ವಿಷಯವಾಗಿ ಕನ್ನಡದಲ್ಲಿ ಅನೇಕ ಪುಸ್ತಕಗಳು ಹೊರಬೀಳುತ್ತಿವೆ. ಇವುಗಳಲ್ಲಿ ಕೆಲವು ಅನುವಾದಗಳು; ಕೆಲವು ಸಾಂಪ್ರದಾಯಕ ವ್ಯಾಖ್ಯಾನಗಳು; ಮತ್ತೆ ಕೆಲವು ಹೊಸ ರೀತಿಯ ಬರವಣಿಗೆಗಳು. ಈ ಹೊಸ ರೀತಿಯ ಗ್ರಂಥಗಳ ಮುಖ್ಯ ಲಕ್ಷಣಗಳು ಸಂಪ್ರದಾಯ ಮಾರ್ಗವನ್ನು ಬಿಟ್ಟು ಸ್ವತಂತ್ರಿಸಿ ವಿಚಾರಮಾಡತಕ್ಕದ್ದು ಮತ್ತು ಗೀತೆಯ ಉಪದೇಶಗಳನ್ನು ನಮ್ಮ ಜನರ ಇಂದಿನ ಜೀವನಕ್ಕೆ ಹೊಂದಿಸಿಕೊಳ್ಳುವುದು. ಶ್ರೀರಂಗರ "ಗೀತಾ ಗಾಂಭೀರ್ಯ" ಈ ಜಾತಿಗೆ ಸೇರಿದುದು.

ಶ್ರೀರಂಗರು ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ನುರಿತವರು. ಕಾದಂಬರಿ ನಾಟಕ ಗಳನ್ನು ಬರೆದು ಪ್ರಸಿದ್ಧರಾದವರು. ಇವರು ಗೀತೆಯ ಮೇಲೆ ಬರೆದಿರುವ ಈ ಹೊಸ ಗ್ರಂಥವನ್ನು ಅನೇಕರು ಓದಲು ಕುತೂಹಲಿಗಳಾಗುವುದು ಸಹಜ.

ಗ್ರಂಥಕರ್ತರು ಈ ಗ್ರಂಥವನ್ನು ಶ್ರೀ ಕೃಷ್ಣನ ಸಮಾಜಶಾಸ್ತ್ರವೆಂದು ಕರೆ ದಿರುವರು. ನಾನಾ ಮುಖವಾದ ಆಧುನಿಕ ಜೀವನ ಸಮಸ್ಯೆಗಳನ್ನು, ಮುಖ್ಯವಾಗಿ ನಮ್ಮ ಸಮಾಜವು ಇಂದು ಎದುರಿಸಬೇಕಾಗಿರುವ ಮೂಲ ಸಮಸ್ಯೆಗಳನ್ನು, ಗೀತೆಯ ಬೆಳಕಿಗೆ ಹಿಡಿದು ಈ ಗ್ರಂಥದಲ್ಲಿ ಪರೀಕ್ಷಿಸಿರುವರು. ಅಲ್ಲಲ್ಲಿ ಗೀತೆಯ ವಾಕ್ಯಗಳಿಗೆ ವಿಶಾಲವಾದ ಅರ್ಥಕಲ್ಪನೆ ಮಾಡಿ ಇಂದಿನ ಜೀವನದ ವಿವಿಧತೆಗೆ ಅವು ಸರಿಹೊಂದುವ ಬಗೆಯನ್ನೂ ತೋರಿರುವರು.

"ದಣಿದ ದಾರಿಕಾರನಿಗೆ ಗೀತೆಯೊಂದು ಸುಂದರ ಸರೋವರದಂತಿದೆ . . . ಆ ಸರೋವರದ ತಿಳಿನೀರಿನಲ್ಲಿ ತನ್ನ ಪಡಿನೆಳಲನ್ನು ನೋಡಿಕೊಂಡ ಪ್ರತಿಯೊಬ್ಬ ದಾರಿಕಾರನು ಅದರಲ್ಲಿ ತನ್ನ ಬಿಂಬವನ್ನೇ, ತನ್ನ ಇಂಗಿತವನ್ನೇ, ತನ್ನ ಹೃದ್ಗತವನ್ನೇ ಕಂಡುಕೊಂಡಿದ್ದಾನೆ" (ಪು. ೩.)

ಶ್ರೀರಂಗರು ಮಾಡಿರುವುದೂ ಇದೇ. ತಮ್ಮ ಸಾಮಾಜಿಕ ದರ್ಶನದ ಬಿಂಬವನ್ನೇ ಇಲ್ಲಿ ಕಂಡುಕೊಂಡಿದ್ದಾರೆ.

ಗೀತೆಯ ರಂಗಭೂಮಿಯ ಮೇಲೆ ನಿಂತ ಪಾತ್ರಗಳು ಇಬ್ಬರು—ಶ್ರೀ ಕೃಷ್ಣಾ ರ್ಜುನರು. ತುಮುಲ ಯುದ್ಧದ ವಾತಾವರಣದಲ್ಲಿ ಅರ್ಜುನನು ಹಠಾತ್ತಾಗಿ ಸಂಶಯ

ಗ್ರಸ್ತನಾಗುವನು. ದಿಕ್ಕುತೋಚದೆ ಶ್ರೀಕೃಷ್ಣನ ಮುಂದೆ ಬಾಣ ಬತ್ತಳಿಕೆಗಳನ್ನು ಕೆಳಗಿಟ್ಟು ತನ್ನ ಹೃದಯ ವೇದನೆಯನ್ನು ಆತನಿಗೆ ನಿವೇದಿಸುವನು. ಆಗ ನಡೆದ ಆಂತರಂಗಿಕ ಸಲ್ಲಾಪವೇ ಗೀತೆಯ ತಿರುಳು. ಈ ಏಕಾಂಕ ನಾಟಕದ ಪ್ರೇಕ್ಷಕ ಸಂಜಯನು ಮಾತ್ರವೇ ಅಲ್ಲ; ಇಡೀ ಜಗತ್ತು. ಅರ್ಜುನನು "ಸ್ಥಿತೋಸ್ಮಿ ಗತ ಸಂದೇಹಃ ಕರಿಷ್ಯೇ ವಚನಂ ತವ" ಎನ್ನಬೇಕಾದರೆ ಶ್ರೀಕೃಷ್ಣನು ಹದಿನೆಂಟು ಅಧ್ಯಾಯಗಳಷ್ಟು ವಿಚಾರಮಾಡಿ "ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು" ಎನ್ನಬೇಕಾಯಿತು. ಈ ವಿಮರ್ಶೆಯ ದೃಷ್ಟಿಯನ್ನೇ ತಾಳಿ ಗ್ರಂಥಕರ್ತರು ತಮಗೆ ಸರಿತೋರಿದ ತೀರ್ಮಾನಕ್ಕೆ ಬಂದಿರುವರು.

ಇವರು ಮಂಡಿಸಿರುವ "ಶ್ರೀಕೃಷ್ಣನ ಸಮಾಜ ಶಾಸ್ತ್ರ"ದ ಸಮಸ್ಯೆಗಳು ಕಠಿಣವಾದವು; ಅಷ್ಟೇ ಮುಖ್ಯವಾದುವೂ ಹೌದು. ಸಮಸ್ಯೆಗಳಿಗೆ ಪರಿಹಾರಗಳು ಕೈಗೆ ಸಿಕ್ಕಿದಂತಾಗಿ ಮತ್ತೆ ನುಣುಚಿಕೊಂಡು ಹೋಗುವ ಸಂದರ್ಭಗಳು ಅನೇಕ ಕಡೆಗೆ ಒದಗಿ ಗೀತೆಯ ಸಹಾಯದಿಂದಲೂ ಅವು ಬಗೆಹರಿಯುವುದು ಕಷ್ಟವಾಗಿ ಕಂಡುಬಂದಿದೆ. "ಸಂಜೆಯವರೆಗೆ ಸುತ್ತಾಡಿದ ಮೇಲೆ ದಾರಿತಪ್ಪಿದೆ ಎಂಬ ಜ್ಞಾನ ದಂತೆ ನಮ್ಮ ಸ್ಥಿತಿಯಾಯಿತೆ!" (ಪು. ೮೯) ಎನ್ನುವ ಪ್ರಸಂಗವು ಅನೇಕ ಕಡೆ ಒದಗಿದೆ. ಆದರೆ ತರ್ಕ ಎಲ್ಲಿಯವರೆಗೆ ಸೆಳೆಯಬಲ್ಲದೋ ಅಲ್ಲಿಯವರೆಗೂ ಅದನ್ನೇ ಹಿಂಬಾಲಿಸಿ ಹೋಗುವ ಸಾಹಸ 'ಶ್ರೀರಂಗ'ರದು.

ಈ ಗ್ರಂಥವನ್ನು ಅವರು ಅರ್ಜುನ ವಿಷಾದಯೋಗವೆಂದೂ ಅರ್ಜುನ ಪ್ರಸಾದ ಯೋಗವೆಂದೂ ಎರಡು ಭಾಗವಾಗಿ ವಿಂಗಡಿಸಿರುವರು. ಮೊದಲನೆಯ ಭಾಗ ಅರ್ಜುನನ ಪ್ರಶ್ನೆ ಏನು ಎಂಬ ನಿಷ್ಕರ್ಷೆಯನ್ನೂ ಎರಡನೆಯ ಭಾಗ ಅದಕ್ಕೆ ಶ್ರೀಕೃಷ್ಣನು ಕೊಟ್ಟ ಉತ್ತರವೇನೆಂಬುದನ್ನೂ ಒಳಗೊಂಡಿವೆ. ಮುಖ್ಯಪ್ರಶ್ನೆಗೆ ಅಂಗವಾಗಿ, ಸಂಸಾರ-ಸಂನ್ಯಾಸ, ಪಾಪ-ಪುಣ್ಯ, ಬುದ್ಧಿ-ಶ್ರದ್ಧೆ, ವ್ಯಕ್ತಿ-ಸಮಾಜ, ಸುಖ-ದುಃಖ ಎಂಬ ಸಮಸ್ಯೆಗಳನ್ನು ವಿಸ್ತಾರವಾಗಿ ಚರ್ಚಿಸಿರುವರು. ಎರಡನೆಯ ಭಾಗದಲ್ಲಿ ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣನ ಉತ್ತರವನ್ನು ವಿವರಿಸುವ ಸಂದರ್ಭದಲ್ಲಿ ಕರ್ಮ ಮತ್ತು ಕರ್ತವ್ಯ, ಪುನರ್ಜನ್ಮದ ಕಲ್ಪನೆ, ಪ್ರಕೃತಿ-ಪುರುಷ, ಅವತಾರ ಮತ್ತು ಆತ್ಮೋದ್ಧಾರ, ಬುದ್ಧಿ ಮತ್ತು ಶ್ರದ್ಧೆ, ಮೋಕ್ಷ ಇಲ್ಲವೆ ಮುನ್ನೋಟ ಎಂಬ ವಿಷಯಗಳನ್ನು ಕೂಲಂಕಷವಾಗಿ ಚರ್ಚಿಸಿರುವರು. ಆಧುನಿಕ ವಿಚಾರಸ್ಫೂರ್ತಿಯನ್ನು ಈ ಚರ್ಚೆಗಳಲ್ಲಿ ಕಾಣುತ್ತೇವೆ. ಗ್ರಂಥಕರ್ತರು ಈಗಿನ ನೈತಿಕ, ಸಾಮಾಜಿಕ, ರಾಜಕೀಯ ಅಭಿಪ್ರಾಯಗಳನ್ನೆಲ್ಲಾ ಗೀತೆಯ ಉಪದೇಶದ ದೃಷ್ಟಿಯಿಂದ ತೂಗಿರುವರು, ಹೀಗೆಯೇ ಸಾಂಪ್ರದಾಯಕ ನಂಬುಗೆಗಳನ್ನು ಚುಚ್ಚಿ ನೋಡಿರುವರು.

ಒಟ್ಟಿನಲ್ಲಿ "ಕರ್ಮ ಮತ್ತು ಕರ್ತವ್ಯ" ತತ್ವಗಳು ಗೀತೆಯ ಅಮೂಲ್ಯ ಉಪದೇಶ ವೆಂದು ಇವರ ಅಭಿಪ್ರಾಯ. ಇವುಗಳ ವಿಷಯದಲ್ಲಿ ಪ್ರಚಾರದಲ್ಲಿರುವ ತಪ್ಪು ಭಾವನೆಗಳನ್ನು ತೋರಿಸಿ ಅವುಗಳ ನಿಜವಾದ ಅರ್ಥವೇನೆಂದು ವಿವರಿಸಿ ಅದು ನಮ್ಮ ಜನರ ಜೀವನವನ್ನು ಹುರಿದುಂಬಿಸಬಲ್ಲ ಶಕ್ತಿಯುಳ್ಳದ್ದೆಂದು ತೋರಿಸಿಕೊಟ್ಟಿದ್ದಾರೆ.

"ಗೀತಾಗಾಂಭೀರ್ಯ"ವು ವಿಚಾರಪರಿಪ್ಲುತವಾಗಿದೆ. ವಾದಸರಣಿ ಸ್ವಾರಸ್ಯ ವಾಗಿದೆ. ಶೈಲಿಯ ಧಾಟಿಯೂ ಅದಕ್ಕೆ ತಕ್ಕಂತೆ ಹೊಂದಿಕೊಂಡಿದೆ.

ಓದುಗರ ಅನುಕೂಲಕ್ಕಾಗಿ ಪರಿಶಿಷ್ಟದಲ್ಲಿ ಗೀತಾಶ್ಲೋಕ ಭಾಗವನ್ನೂ, ಮೂಲಶ್ಲೋಕಗಳ ಚರ್ಚಾಸಾರಾಂಶವನ್ನೂ, ಕೊನೆಯಶ್ಲೋಕಗಳ ಪಟ್ಟಿಯನ್ನೂ ಕೊಟ್ಟಿರುತ್ತಾರೆ.

ಎಂ. ಯಾಮುನಾಚಾರ್.

---

**ಶ್ರೀಮನ್ಮಹಾಭಾರತ ತಾತ್ಪರ್ಯನಿರ್ಣಯಃ—ಅಧ್ಯಾಯಗಳು (೧-೯).** ಇಂಗ್ಲಿಷ್ ಭಾಷಾಂತರ. ಭಾಷಾಂತರಕರ್ತರು: ಶ್ರೀಮಾನ್ ಬಿ. ಗುರುರಾಜಾರಾವ್, ಬಿ.ಎ., ಬಿ.ಎಲ್., ನಿವೃತ್ತ ಸಬ್‌ಜಡ್ಜ್ ಅವರು. ರಾವ್ ಬಹದ್ದೂರ್ ಬಿ. ವೆಂಕಟೇಶಾಚಾರ್. ಎಂ.ಎ., ಅವರ ಮುನ್ನುಡಿಯೊಡನೆ; ಪುಟ ೨೮೯; ಬೆಲೆ, ೨ ರೂಪಾಯಿ.

ಮಧ್ವಮತಸ್ಥರಲ್ಲಿ ಬಹಳ ಮನ್ನಣೆಗೆ ಪಾತ್ರವಾದ, ಶ್ರೀಮನ್ಮಧ್ವಾಚಾರ್ಯರಿಂದ ರಚಿತವಾದ ಗ್ರಂಥಗಳಲ್ಲಿ ಮುಖ್ಯವಾದ, ಶ್ರೀಮನ್ಮಹಾಭಾರತ ತಾತ್ಪರ್ಯ ನಿರ್ಣಯವೆಂಬ ಗ್ರಂಥವನ್ನು ಇಂಗ್ಲಿಷ್ ಭಾಷೆಗೆ ಭಾಷಾಂತರಿಸಿರುವ ಶ್ರೀಮಾನ್ ಗುರುರಾಜಾರಾಯರು ವಂದನಾರ್ಹರು. ವಿಷ್ಣುವು ಸರ್ವೋತ್ತಮ, ಚೇತನಾ ಚೇತನಾತ್ಮಕ ಪ್ರಪಂಚವು ಸತ್ಯ ಮತ್ತು ವಿಷ್ಣುವಿನಿಂದ ಭಿನ್ನ, ವಾಯುದೇವನು ಸರ್ವಜೀವೋತ್ತಮ ಎಂಬ ಮಧ್ವಸಿದ್ಧಾಂತದ ಮುಖ್ಯತತ್ವಗಳು ಮಹಾಭಾರತದಲ್ಲಿ ಸದೃಷ್ಟಾಂತವಾಗಿ ಪ್ರತಿಪಾದಿಸಲ್ಪಟ್ಟಿವೆ ಎಂದು ಶ್ರೀಮದಾಚಾರ್ಯರು ತಾತ್ಪರ್ಯ ನಿರ್ಣಯದಲ್ಲಿ ತೋರಿಸಿರುತ್ತಾರೆ. ಭೀಮನು ಮುಂದೆ ಬ್ರಹ್ಮದೇವನ ಪದವನ್ನು ಹೊಂದುವ ವಾಯುದೇವನ ಅವತಾರ; ಶುಕಾಚಾರ್ಯರು ರುದ್ರನ ಅವತಾರ. ಕೃಷ್ಣರೂಪಿಯಾದ ವಿಷ್ಣುವಿನ ಅಧೀನವಾಗಿ ಭೀಮಾದಿಗಳು ಕಂಡುಬರುವುದ ರಿಂದಲೂ ವೇದವ್ಯಾಸರೂಪಿಯಾದ ವಿಷ್ಣುವಿನಿಂದ ಶುಕಾಚಾರ್ಯರು ಉಪದಿಷ್ಟ ರಾಗಿರುವುದರಿಂದಲೂ ಬ್ರಹ್ಮರುದ್ರಾದಿಗಳಿಗೆ ವಿಷ್ಣುವು ಉತ್ತಮನೆಂದು ಸಿದ್ಧಿಸು ವುದು. ಎಲ್ಲಾ ಜೀವರಿಗಿಂತಲೂ ಬ್ರಹ್ಮದೇವನು (ವಾಯುದೇವನು) ಉತ್ತಮ ನೆಂಬುದು ಭೀಮಸೇನನ ದೃಷ್ಟಾಂತದಿಂದ ಸಿದ್ಧವಾಗುವುದು. ವಿಷ್ಣುವಿನ ಭೂಭಾರ

ಹರಣ ಕಾರ್ಯದಲ್ಲಿ ಪ್ರಧಾನಪಾತ್ರವು ಭೀಮಸೇನನಿಗೆ ಸೇರಿದುದು. ಜರಾಸಂಧ ದುರ್ಯೋಧನರನ್ನು ವಧಿಸಿದವನು ಭೀಮಸೇನನೇ. ಮುನ್ನುಡಿಯಲ್ಲಿ ರಾವ್ ಬಹದ್ದೂರ್ ವೆಂಕಟೇಶಾಚಾರ್ಯರು ಹೇಳಿರುವಂತೆ ಸ್ಥೂಲವಾಗಿ ಭಾರತವನ್ನು ನೋಡುವವರಿಗೆ ಅರ್ಜುನನೇ ಹೆಚ್ಚು ಪ್ರಾಮುಖ್ಯನೆಂದು ತೋರಿದರೂ ವಿಚಾರಮಾಡಿ ನೋಡಿದರೆ ಭೀಮಸೇನನೇ ಪಾಂಡವರಲ್ಲಿ ಗುಣಜ್ಯೇಷ್ಠನೆಂದು ಕಂಡುಬರುವುದು. "ದೇವಶ್ರೇಷ್ಠಸ್ತು ಮಾರುತಃ" ಎಂಬುದು ಭಾರತವಾಕ್ಯ. ತತ್ವಜ್ಞಾನದಲ್ಲಿಯೂ, ವಿಷ್ಣುಭಕ್ತಿಯಲ್ಲಿಯೂ, ಧೈರ್ಯದಲ್ಲಿಯೂ, ಪಾಂಡಿತ್ಯದಲ್ಲಿಯೂ ಭೀಮಸೇನನಿಗೆ ಸಮರು ಯಾರೂ ಇಲ್ಲ ಎಂದು ಯುಧಿಷ್ಠಿರನು ಹೇಳುತ್ತಾನೆ. ವಿರಾಟಪರ್ವದಲ್ಲಿ ದುರ್ಯೋಧನನೇ ಭೀಮಸೇನನು ಶಾಸ್ತ್ರವೇತ್ತರಲ್ಲಿಯೂ, ಬಲಾಢ್ಯರಲ್ಲಿಯೂ ಉತ್ತಮನು ಎಂದು ಹೇಳಿರುವನು.

ಒಂದನೆಯ ಅಧ್ಯಾಯದಲ್ಲಿ ಎಲ್ಲಾ ಶಾಸ್ತ್ರಗಳೂ ವಿಷ್ಣುಸರ್ವೋತ್ತಮತ್ವವನ್ನು ಪ್ರತಿಪಾದಿಸುತ್ತವೆ ಎಂದೂ, ಎರಡನೆಯ ಅಧ್ಯಾಯದಲ್ಲಿ ಭಾರತವಾಕ್ಯಪ್ರಮಾಣಗಳೂ, ಮೂರನೆಯ ಅಧ್ಯಾಯದಲ್ಲಿ ಸೃಷ್ಟಿ ಮುಂತಾದ ಕಾರ್ಯಗಳ ವಿಚಾರವೂ, ಮಿಕ್ಕ ಆರು ಅಧ್ಯಾಯಗಳಲ್ಲಿ ರಾಮಾಯಣ ಕಥೆಯೂ ಹೇಳಲ್ಪಟ್ಟಿರುವುವು. ರಾಮಾಯಣ ಮಹಾಭಾರತ ಇವುಗಳಲ್ಲಿ ತೋರುವ ಅನೇಕ ವಿರೋಧಗಳನ್ನು ಶ್ರೀಮದಾಚಾರ್ಯರು ಎಷ್ಟು ಸಮಂಜಸವಾಗಿ ಪರಿಹರಿಸಿರುವರು ಎಂಬುದು ಆಮೂಲಾಗ್ರವಾಗಿ ಗ್ರಂಥಾವಲೋಕನ ಮಾಡಿದವರಿಗೆ ಗೋಚರಿಸದಿರದು.

ಶ್ರೀಮಾನ್ ಗುರುರಾಜಾರಾಯರು ಬಹಳ ಸುಲಭವಾದ ಮತ್ತು ಲಲಿತವಾದ ಶೈಲಿಯಲ್ಲಿ ಭಾಷಾಂತರಿಸಿರುವರು. ಸಂಸ್ಕೃತ ಸಂಸ್ಕೃತಿಯ ಮರ್ಮಗಳನ್ನು ಅನ್ಯ ಸಂಸ್ಕೃತಿಯ ಭಾಷೆಗೆ ಭಾಷಾಂತರಿಸಿ ತಿಳಿಸುವುದು ಬಹಳ ಶ್ರಮಸಾಧ್ಯ. ಆದರೂ ಅದನ್ನು ಶ್ರೀಮಾನ್ ಗುರುರಾಜಾರಾಯರು ಬಹಳ ಮಟ್ಟಿಗೆ ಸಾಧಿಸಿರುವರೆಂದರೆ ಅತಿಶಯೋಕ್ತಿಯಾಗಲಾರದು. ಮೂವತ್ತೆರಡು ಅಧ್ಯಾಯಗಳುಳ್ಳ ಈ ಗ್ರಂಥವನ್ನು ರಾಯರು ನಿರ್ವಿಘ್ನವಾಗಿ ಭಾಷಾಂತರಿಸಲಿ ಎಂದು ನಮ್ಮ ಹಾರೈಕೆ. ಪುಟ ೧೭ ರಲ್ಲಿ ತಥಾಪರಂ ಎಂಬ ಶಬ್ದವನ್ನು ತಥಾ ಪರಂ ಎಂದು ಬಿಡಿಸಿ ಬ್ರಹ್ಮಾಂಡ ಪುರಾಣವು ವರಾಹ ಪುರಾಣಕ್ಕಿಂತ ಹೆಚ್ಚು ಪ್ರಾಮಾಣ್ಯ ಉಳ್ಳದ್ದೆಂದು ಅರ್ಥಬರುವಂತೆ ಭಾಷಾಂತರಿಸಿರುವರು. ಆದರೆ ಆ ಶಬ್ದವನ್ನು ತಥಾ + ಅಪರಂ ಎಂದು ಬಿಡಿಸಿ ವರಾಹ ಪುರಾಣಕ್ಕೆ ಸದೃಶವಾದ ಮತ್ತೊಂದಾದ ಬ್ರಹ್ಮಾಂಡ ಪುರಾಣವೆಂದು ಅರ್ಥಮಾಡುವುದು ಸಿದ್ಧಾಂತಾನುಸಾರಿ ಎಂದು ನಮ್ಮ ನಂಬಿಕೆ.

ಬಿ. ಎ. ಕೃಷ್ಣಸ್ವಾಮಿರಾವ್.

---

# ಸಾದರ ಸ್ವೀಕಾರ

೧. **ಮೊಗ್ಗೆಯ ಮಾಲೆ**—ಬರೆದವರು : ಶ್ರೀ ಶಾಂತಾದೇವಿ ಮಾಳವಾಡ; ಪು. ಅಷ್ಟ ಪತ್ರ ೧೨+೭೬; ಪ್ರಕಾಶಕರು: ಎಂ. ಜಿ. ವಿರೂಪಾಕ್ಷನ್, ಕಿಲ್ಲೆ, ಧಾರವಾಡ; ಬೆಲೆ, ೬ ಆಣೆ.

೨. **ಪಂಪಮಹಾಕವಿ**—ಆದಿಪಂಪನ ಸಹಸ್ರಸಾಂವತ್ಸರಿಕೋತ್ಸವ ಕಾಲದಲ್ಲಿ (೨೪-೧೨-೧೯೪೧) ಶ್ರೀ|| ಮುಳಿಯ ತಿಮ್ಮಪ್ಪಯ್ಯನವರು ಮಾಡಿದ ಅಧ್ಯಕ್ಷೋಪನ್ಯಾಸ. ಪಂಪ ಕವಿಯ ಚಿತ್ರದೊಡನೆ, ಕ್ರೌ. ಅ. ೩೮ ; ಬೆಲೆ?

೩. **ಉಪನಿಷತ್ತುಗಳ ಮೊದಲನೆಯ ಪರಿಚಯ**—ಲೇಖಕರು: ಶ್ರೀ. ಯ. ಸುಬ್ರಹ್ಮಣ್ಯಶರ್ಮ; ಪ್ರಕಾಶಕರು: ಅಧ್ಯಾತ್ಮ ಪ್ರಕಾಶ ಕಾರ್ಯಾಲಯ, ಹೊಳೆನರಸಿಪುರ; ಕ್ರೌ. ಅ. ೫೪ ; ಬೆಲೆ?

೪. **ಗಂಡುಗಲಿ ಕುಮಾರರಾಮ**—ಬರೆದವರು: ಶ್ರೀ ಹುಲ್ಲೂರು ಶ್ರೀನಿವಾಸ ಜೋಯಿಸರು ; ಮಿಂಚಿನ ಬಳ್ಳಿಯ ನಾಲ್ಕನೆಯ ವರುಷದ ನಾಲ್ಕನೆಯ ಕುಡಿ; ಕ್ರೌ ಅ. ೧೧೬; ಬೆಲೆ, ರೂ. ೧.

೫. **ಲಾವಣಿ** (ದನಗಳ ಪ್ರದರ್ಶನ, ಹಾಸನ)—ಬರೆದವರು: ಶ್ರೀ ಯೋಗ ; ಪು. ಅ. ೬; ಬೆಲೆ?

೬. **ಲಾವಣಿ** (ಸ್ವಾಗತ ಸಮಿತಿ, ಹನ್ನೆರಡನೆಯ ಒಕ್ಕಲಿಗರ ಸಮ್ಮೇಳನ, ಹಾಸನ)—ಬರೆದವರು: ಶ್ರೀ ಯೋಗ ; ಕ್ರೌ. ಅ. ೮ ; ಬೆಲೆ?

೭. **ಪುರಾಣನಾಮ ಚೂಡಾಮಣಿ**—ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೫; ಲೇಖಕರು: ಶ್ರೀ ಬೆನಗಲ್ ರಾಮರಾವ್, ಎಂ.ಎ., ಎಲ್‌ಎಲ್.ಬಿ. ಮತ್ತು ವಿದ್ವಾನ್ ಪಾನ್ಯಂ ಸುಂದರಶಾಸ್ತ್ರಿ ; ಡೆಮಿ. ಅ. ೬೩೬; ಬೆಲೆ, ರೂ. ೨-೧೨-೦.

೮. **A Grammar of the Oldest Kanarese Inscriptions**—By Dr. A. N. Narasimhia, M.A., L.T., Ph.D. (London); Published by the University of Mysore. Demy 8 vo, pp. xxi + 375; Price, Rs. 2-12-0.

೯. **ಯಶೋಧರ ಚರಿತ್ರೆಯ ಸಂಗ್ರಹ**—ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ—೧೬; ಸಂಪಾದಕರು: ಶ್ರೀ ಕೆ. ವಿ. ರಾಘವಾಚಾರ್, ಎಂ.ಎ., ಬಿ.ಟಿ.; ಕ್ರೌ. ಅ. ೭೦+೧೭೬; ಬೆಲೆ, ೧೨ ಆಣೆ.

೧೦. **ಸರ್ಕಾರ** (ಅದರ ಪದ್ಧತಿ ಮತ್ತು ರಚನಾಕ್ರಮ)—ಬರೆದವರು: ಶ್ರೀ. ಎಚ್. ಕೃಷ್ಣರಾವ್, ಎಂ.ಎ. ; ಪ್ರಕಾಶಕರು: ಮೈಸೂರು ವಿಶ್ವವಿದ್ಯಾನಿಲಯ; ಸರ್. ಕೆ. ಪಿ. ಪುಟ್ಟಣ್ಣ ಚೆಟ್ಟರ ಪುದುವಟ್ಟಿನ ಪ್ರಕಟನಮಾಲೆ—೩; ಪು. ಅ. ೧೪೭; ಬೆಲೆ, ೨ ಆಣೆ.

೧೧. **ಅಹಲ್ಯೆ**—ಬರೆದವರು: ಶ್ರೀ. ಪು. ತಿ. ನರಸಿಂಹಾಚಾರ್, ಬಿ.ಎ.; ಪ್ರಕಾಶಕರು: ಕಾವ್ಯಾಲಯ, ಮೈಸೂರು; ಕ್ರೌ. ೧೬ ಅ. ೨೪+೧೨೩; ಬೆಲೆ, ರೂ. ೧.

೧೨. **ಸೀತಾವನವಾಸ**—ಬರೆದವರು: ಶ್ರೀ. ಪಂಡಿತ ಕೆ. ನರಸಿಂಹಶಾಸ್ತ್ರಿ; ಪ್ರಕಾಶಕರು: ಶ್ರೀ. ಟಿ. ವಿ. ಬಾಲಕೃಷ್ಣ ಶೆಣೈ ಮತ್ತು ಸೋದರರು, ತೀರ್ಥಹಳ್ಳಿ; ಕ್ರೌ. ೧೬. ಅ. ೧೯; ಬೆಲೆ, ರೂ. ೦-೨-೬.

೧೩. **ಕಂದನ ಕೊಳಲು**—ಬರೆದವರು: ಶ್ರೀ. ಯೋಗ, ಹಾಸನ; ಪು. ಅ. ೧೬; ಬೆಲೆ, ೨ ಆಣೆ.

೧೪. **ಚಿತ್ರಭಾನು ಸಂವತ್ಸರದ ಪಂಚಾಂಗವು**—ಎಲ್ಲೂರು ಶ್ರೀ. ಪಂಡಿತ ಲಕ್ಷ್ಮೀನಾರಾಯಣರಾಯರಿಂದ ಗುಣಿಸಿ ಪರಿಶೋಧಿಸಲ್ಪಟ್ಟು ಸುಜ್ಞಾನಾಮೃತ ಕಾರ್ಯಾಲಯದಿಂದ ಪ್ರಕಟಿಸಲ್ಪಟ್ಟದ್ದು; ಬೆಲೆ, ೩ ಆಣೆ.

೧೫. **ಶೈಕ್ಷಣಿಕ ಮನಶ್ಶಾಸ್ತ್ರ**—ಬರೆದವರು: ಶ್ರೀ ವಿ. ಕೆ. ಜವಳಿ, ಬಿ.ಎ. (ಆನರ್ಸ್), ಬಿ.ಟಿ., ಡಿಪ್.ಪಿ.ಇಡಿ., ಧಾರವಾಡ; ಪ್ರಕಾಶಕರು: ಕರ್ನಾಟಕ ಸಾಹಿತ್ಯಮಂದಿರ, ಧಾರವಾಡ; ಕ್ರೌ. ೧೬. ಅ. ೧೯೩; ಬೆಲೆ, ರೂ. ೧–೪–೦.

೧೬. **ಐಚ್ಛಿಕ ಬೀಜಗಣಿತಸಾರ**—ಬರೆದವರು: ಶ್ರೀ. ಎಲ್. ಕೃಷ್ಣರಾವ್, ಬಿ.ಎ., ಪ್ರಕಾಶಕರು: ಪ್ರಭಾಕರ ಬುಕ್‌ಡಿಪೋ, ಕೋಟೆ, ಬೆಂಗಳೂರು ಸಿಟಿ; ಕ್ರೌ. ೧೬. ಅ. ೨೪೫; ಬೆಲೆ, ರೂ. ೧–೪–೦.

---

# ವಸ್ತುಕೋಶ

**ಪಂಪನ ಮೇಲಣ ಲೇಖನಗಳು**

ಈ ಸಂಚಿಕೆಗೆ ವೃಷಸಂವತ್ಸರದ ಸಂಪುಟವು ಮುಗಿಯಿತು. ಕಳೆದ ಕಾರ್ತಿಕ ಶುದ್ಧ ಪಂಚಮಿಗೆ (೨೫-೧೦-೧೯೪೧) ಪಂಪನು ಆದಿಪುರಾಣವನ್ನು ಬರೆದು ಮುಗಿಸಿ ಒಂದುಸಾವಿರ ವರ್ಷಗಳು ಕಳೆದದ್ದರಿಂದ, ಮಿಕ್ಕ ಕಡೆಗಳಲ್ಲಿ ನಡೆದಂತೆ ಮೈಸೂರು ವಿಶ್ವವಿದ್ಯಾನಿಲಯದ ಮುಖ್ಯ ವಿದ್ಯಾಸಂಸ್ಥೆಗಳಲ್ಲೂ ಸ್ಮಾರಕೋತ್ಸವಗಳು ನಡೆದು ಆ ಕನ್ನಡ ಕವಿಕುಲ ಗುರುವಿಗೆ ಭಕ್ತಿಗೌರವಗಳು ಸಂದುವು. ಅದರ ಜ್ಞಾಪಕವಾಗಿ ಪ್ರಬುದ್ಧ ಕರ್ಣಾಟಕದ ಒಂದು ಸ್ಮಾರಕ ಸಂಚಿಕೆಯನ್ನೋ ಅನುಬಂಧವನ್ನೋ ಪ್ರಕಟಿಸಬೇಕೆಂಬ ಉದ್ದೇಶವಿತ್ತು. ಆದರೆ ಈ ವರ್ಷದ ಮೊದಲ ಮೂರು ಸಂಚಿಕೆಗಳಿಗೆ ಧಾರಾಳವಾಗಿ ಹಣ ಖರ್ಚುಮಾಡಿಬಿಟ್ಟದ್ದರಿಂದ ಈ ಸಂಕಲ್ಪವನ್ನು ಮಾನಸಿಕ ಮಾಡಬೇಕಾಯಿತು; ಪತ್ರಿಕೆಯನ್ನು ಸ್ವಲ್ಪ ತೆಳ್ಳಗೆಮಾಡಿ, ಅದರ ಅಂದಚಂದಗಳನ್ನು ಕಡಮೆಮಾಡಿ ಹೊರಡಿಸಬೇಕಾಯಿತು. ಆದರೂ ಪಂಪನಿಗೆ ಇದರಲ್ಲಿ ಬಹುದೊಡ್ಡ ಭಾಗವನ್ನು ಮೀಸಲಾಗಿಟ್ಟಿದೆ. ಪಂಪನನ್ನು ಕುರಿತು ಎರಡೇ ಪ್ರಬಂಧಗಳಿದ್ದರೂ ಅವು ಪ್ರೌಢವಾಗಿದ್ದು ಅವನ ಕಾವ್ಯಗಳ ಸಾರವತ್ತಾದ ಭಾಗವನ್ನು ಕನ್ನಡಿಗರಿಗೆ ಪರಿಚಯ ಮಾಡಿಕೊಡುವವಾಗಿವೆ. ಈ ಲೇಖನಗಳನ್ನು ಬರೆದುಕೊಟ್ಟ ನಮ್ಮ ವಿದ್ವನ್ಮಿತ್ರರಿಗೆ ವಂದನೆಗಳು.

* * *

**ವಿಶ್ವವಿದ್ಯಾನಿಲಯದ ಇಬ್ಬರು ಕನ್ನಡಿಗ ವಿದ್ವನ್ಮಣಿಗಳು**

ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್. ಅವರು ಕಳೆದ ತಿಂಗಳು, ಇಂಗ್ಲಿಷ್ ಪ್ರೊಫೆಸರ್ ಮತ್ತು ಕನ್ನಡದ ಗೌರವ ಪ್ರೊಫೆಸರ್ ಈ ಅಧಿಕಾರಗಳಿಂದ ನಿವೃತ್ತರಾದರು. ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾವ್, ಎಂ.ಎ. ಬಾರ್-ಅಟ್-ಲಾ. ಅವರು ತಮ್ಮ ವೈಸ್-ಛಾನ್ಸೆಲರ್ ಅಧಿಕಾರದಿಂದ ಈ ತಿಂಗಳು ನಿವೃತ್ತರಾಗಲಿರುವರು. ಇವರ ಅಧಿಕಾರಕ್ಕೆ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಗಳಾಗಿದ್ದ ಶ್ರೀಮಾನ್ ಇ. ಜಿ. ಮೆಕಾಲ್ಪೈನ್, ಎಂ.ಎ., ಜೆ.ಪಿ. ಅವರು ಆಗಲೇ ಬಂದು ಕಾರ್ಯ ನಡಸುತ್ತಿದ್ದಾರೆ. ಇವರಿಗೆ ಸ್ವಾಗತವನ್ನು ಬಯಸುತ್ತೇವೆ.

ಶ್ರೀಮಾನ್ ಶ್ರೀಕಂಠಯ್ಯನವರೂ ಸುಬ್ಬರಾಯರವರೂ ನಮ್ಮವರು, ಕನ್ನಡಿಗರು, ಮೈಸೂರಿನವರು, ಶ್ರೀರಂಗಪಟ್ಟಣದವರು. ಒಟ್ಟಿಗೆ ಬೆಳೆದವರು, ಆಡಿದವರು, ಓದಿದವರು. ವಯಸ್ಸಿನಲ್ಲಿ ಸ್ವಲ್ಪ ಹೆಚ್ಚು ಕಡಮೆ ಒಂದೆ; ಮಹಾರಾಜಾಕಾಲೇಜಿನಲ್ಲಿ ಉಪಾಧ್ಯಾಯರಾಗಿ ಸೇರಿದ್ದೂ ಸ್ವಲ್ಪ ಹೆಚ್ಚು ಕಡಮೆ ಒಂದೆ ಕಾಲದಲ್ಲಿ. ಅವರು ಕಾಲೇಜಿಗೆ ಅಧ್ಯಾಪಕರಾಗಿ ಬಂದಾಗ ಶಿಕ್ಷಣದ ಆವರಣದಲ್ಲಿ ಅರುಣೋದಯವಾದಂತಾಗಿ ಒಂದು ಹೊಸ ಚೈತನ್ಯ ಬಂತು. ಅದಕ್ಕೆ ಹಿಂದಿನ ಕಾಲವನ್ನೂ ನೋಡಿದವರು ಇದನ್ನು ಚೆನ್ನಾಗಿ ಗ್ರಹಿಸಬಲ್ಲರು. ಇಬ್ಬರೂ ಮೂವತ್ತು ವರ್ಷಕ್ಕೆ ಮೇಲ್ಪಟ್ಟು ದುಡಿದು ಸೇವೆಸಲ್ಲಿಸಿ ವಿಶ್ರಾಂತಿ ಪಡೆದಿದ್ದಾರೆ. ಈ ವಿಶ್ರಾಂತಿಯು ಅವರಿಗೆ ಸುಖಮಯವಾಗಲಿ, ಶಾಂತಿಮಯವಾಗಲಿ!

ಶ್ರೀಮಾನ್ ಸುಬ್ಬರಾಯರು ಶಿಕ್ಷಣಶಾಖಾಧಿಕಾರಿಗಳಾಗಿದ್ದಾಗ ಮಾಡಿದ ಒಂದು ದೊಡ್ಡ ಕಾರ್ಯವೆಂದರೆ, ಕನ್ನಡದ ಮೂಲಕ ಶಿಕ್ಷಣಕ್ಕೆ ಏರ್ಪಾಡು. ಇದಕ್ಕೆ ಬೇಕಾದಷ್ಟು ಅಡರು ತೊಡರುಗಳಿದ್ದುವು. ಅವೆಲ್ಲವನ್ನೂ ಜಯಿಸಿ ಅವರು ತಮ್ಮ ಸಂಕಲ್ಪವನ್ನು ಸಾಧಿಸಿದರು. ಇದರಿಂದ, ಕಂಡಹಾಗೆ ಕನ್ನಡ ಒಂದು ಹೆಜ್ಜೆಯನ್ನು ಮುಂದಿಟ್ಟಿತು. ವೈಸ್-ಛಾನ್ಸಲರಾದ ಮೇಲೆ ಕಾಲೇಜಿನ ಮಟ್ಟದಲ್ಲಿಯೂ ಈ ನೀತಿಯನ್ನು ಮುಂದುವರಿಸಲು ಏರ್ಪಾಡು ಮಾಡುವರೆಂದು ಹಲವರು ಆಶೆಪಟ್ಟುಕೊಂಡಿದ್ದರು; ಆದರೆ ಏಕೋ ಅದು ಸಾಗಲಿಲ್ಲ; ಹೈಸ್ಕೂಲಿನಲ್ಲಿ ಈ ಸಂಬಂಧವಾಗಿ ಇರುವ ಕಷ್ಟಗಳಿಗಿಂತ ಇಲ್ಲಿ ಹೆಚ್ಚು; ಆದರೆ ಆ ಕಷ್ಟಗಳನ್ನು ಅವರಂಥ ಮೇಧಾವಿಗಳೂ ಅಭಿಮಾನಿಗಳೂ ಎದುರಿಸದೆ ಇನ್ನಾರು ಎದುರಿಸುವುದು ಸಾಧ್ಯ? ಇದು ಅವರ ಮನಸ್ಸಿನಲ್ಲಿರುವ ಪವಿತ್ರಸಂಕಲ್ಪವೆಂದೂ ಮುಂದಾದರೂ ಅದು ಈಡೇರುವುದಕ್ಕೆ ಅವರು ತಮ್ಮ ಬೆಂಬಲವನ್ನು ಕೊಡುವರೆಂದೂ ಕನ್ನಡಿಗರೆಲ್ಲರೂ ನಿರೀಕ್ಷಿಸುತ್ತಾರೆ.

"ಪ್ರಚಾರಪುಸ್ತಕಮಾಲೆ"ಯು ಆರಂಭವಾದದ್ದು ಅವರ ಪ್ರಯತ್ನ ಪ್ರೋತ್ಸಾಹಗಳಿಂದಲೇ; ಇಷ್ಟು ಅಲ್ಪಕಾಲದಲ್ಲಿ, ಇಷ್ಟು ಅಲ್ಪ ಬೆಲೆಗೆ, ಆದರೆ ಇಷ್ಟು ಪ್ರಮಾಣವತ್ತಾಗಿ, ಸರಳವಾಗಿ, ವಿವಿಧ ವಿಷಯಗಳನ್ನೊಳಕೊಂಡ ಗ್ರಂಥಗಳನ್ನು ಬರೆಯುವಂತೆ ಲೇಖಕರನ್ನು ಪ್ರೋತ್ಸಾಹಿಸಿ ಕೆಲಸ ಮಾಡಿಸಿದ್ದರಿಂದ ವಿಶ್ವವಿದ್ಯಾನಿಲಯದ ಉಪಯೋಗವು ಜನಸಾಮಾನ್ಯಕ್ಕೆ ಹೆಚ್ಚು ಪ್ರಮಾಣದಲ್ಲಿ ದೊರೆಯುವಂತಾಯಿತು. (ಈ ಸಂದರ್ಭದಲ್ಲಿ ಆ ಮಾಲೆಯ ಸಂಪಾದಕರಾದ ಶ್ರೀಮಾನ್ ಜಿ. ಹನುಮಂತರಾವ್, ಎಂ.ಎ. ಅವರ ಸ್ನೇಹ ಸಾಹಸ ಪರಿಶ್ರಮಗಳನ್ನು ಎಷ್ಟು ಹೊಗಳಿದರೂ ಸಾಲದಂತಿದೆ.)

ಈಗ ಮೂರು ವರ್ಷಗಳಿಂದ "ಪ್ರಬುದ್ಧಕರ್ಣಾಟಕ"ವು ಅವರ ವಿಶೇಷ

ಆದರ ಪ್ರೋತ್ಸಾಹಗಳಿಗೊಳಗಾಗಿತ್ತು. ಪ್ರಚಾರಪುಸ್ತಕಮಾಲೆ ಪ್ರಬುದ್ಧ ಕರ್ಣಾಟಕ ಇವೆರಡನ್ನೂ ಅವರು ತಮ್ಮ ಎರಡು ಮುದ್ದು ಮಕ್ಕಳ ಹಾಗೆ ನೋಡಿಕೊಂಡರು. ಅವಕ್ಕೆ ಕೇಳಿದ್ದನ್ನು ಕೊಟ್ಟರು ; ಯಾವುದನ್ನೂ ಇಲ್ಲವೆನ್ನಲಿಲ್ಲ. ಆದ್ದರಿಂದ ಪ್ರಬುದ್ಧ ಕರ್ಣಾಟಕವು ಈಗ ಮೂರು ವರ್ಷಗಳಿಂದ ದಿನದಿನಕ್ಕೆ ಪುಷ್ಟವಾಗಿ ಬೆಳೆದುಕೊಂಡು ಬಂತು. ಅವರು ಕೊಟ್ಟ ಈ ಆದರ ಪೋಷಣೆಗಳಿಗಾಗಿ ನಾವು ಸಂಪಾದಕ ಮಂಡಲಿಯ ಪರವಾಗಿ ಅವರಿಗೆ ನಮ್ಮ ಕೃತಜ್ಞತೆಯನ್ನು ಸಲ್ಲಿಸುತ್ತೇವೆ.

ಶ್ರೀಮಾನ್ ಶ್ರೀಕಂಠಯ್ಯನವರು ಇಂಗ್ಲಿಷ್ ಪ್ರೊಫೆಸರಾಗಿ ಪ್ರಸಿದ್ಧರಾದರು. ಆದರೆ ಅವರು ವಿಶ್ರಾಂತಿಪಡೆಯುವಾಗಲೂ, ಜೊತೆಗೆ ಕನ್ನಡದ ಗೌರವ ಪ್ರೊಫೆಸರೂ ಆಗಿದ್ದರೆಂದೂ, ಕನ್ನಡದ ಪ್ರೌಢತರಗತಿಗಳಿಗೆ ಉಪನ್ಯಾಸ ಮಾಡುತ್ತಿದ್ದರೆಂದೂ ಅನೇಕರಿಗೆ ತಿಳಿಯದು. ಅದಕ್ಕಿಂತ ಹೆಚ್ಚಾಗಿ, ಅವರು ಉದ್ಯೋಗಕ್ಕೆ ಸೇರಿದಾಗಲೆ, ಕಾಲೇಜು ತರಗತಿಗಳಲ್ಲಿ ಎಷ್ಟು ಇಂಗ್ಲೀಷ್ ಪಾಠ ಹೇಳುತ್ತಿದ್ದರೋ ಅಷ್ಟು ಕನ್ನಡವನ್ನೂ—ಇಂಟರ್‌ಮೀಡಿಯೆಟ್ ತರಗತಿಗೆ, ಬಿ.ಎ. ತರಗತಿಗೆ—ಪಾಠ ಹೇಳು ತ್ತಿದ್ದರೆಂದು ತಿಳಿಯದು. ಅವರ ಬೋಧನಕ್ರಮದಲ್ಲಿ ಇಂಗ್ಲಿಷ್ ತರಗತಿಗೆ ಕನ್ನಡದ ಉಪಯೋಗವೂ, ಕನ್ನಡ ತರಗತಿಗೆ ಇಂಗ್ಲಿಷಿನ ಉಪಯೋಗವೂ ಆಗುತ್ತಿತ್ತು. ಇಂಗ್ಲಿಷ್ ಪಾಠದಲ್ಲಿ ಒಂದು ರಸವತ್ತಾದ ಅಥವಾ ಮಹತ್ತಿನ ಸಂಗತಿ ಬಂದರೆ ಅದನ್ನು ಕನ್ನಡದಲ್ಲಿ ತರುವುದು ಹೇಗೆ ಎಂದು ಮೊದಲು ಯೋಚನೆ ಹೊರಡುತ್ತಿತ್ತು. ಸಾಹಿತ್ಯವನ್ನು ಐತಿಹಾಸಿಕ ದೃಷ್ಟಿಯಿಂದಲೂ, ತುಲನಾತ್ಮಕದೃಷ್ಟಿಯಿಂದಲೂ ಓದಿದರೇ ನಿಜವಾದ ಬೆಲೆಕಟ್ಟುವ ವಿಮರ್ಶಬುದ್ಧಿ ಬರುವುದೆಂಬುದನ್ನು ಅವರು ತೋರಿಸಿಕೊಟ್ಟರು. ವ್ಯಾಸಂಗ ಮಾಡಿದ್ದನ್ನು ಜೀರ್ಣಿಸಿಕೊಂಡು ಉಪಯೋಗಿಸಿ ಕೊಳ್ಳುವುದನ್ನು ಹೇಳಿಕೊಟ್ಟವರು ಅವರು; ಸಾಹಿತ್ಯ ಸೌಂದರ್ಯವನ್ನು ಸವಿದು ಆನಂದಪಡುವುದನ್ನು ಹೇಳಿಕೊಟ್ಟವರು ಅವರು. ನಿಮ್ಮ ಓದುಮನೆಯ ಕಿಟಿಕಿಗಳನ್ನು ತೆರೆಯಿರಿ, ಎಲ್ಲೆಲ್ಲಿಂದ ಬೆಳಕು ಬಂದರೂ ಅದನ್ನು ಬರಮಾಡಿಕೊಳ್ಳಿ, ಸೂರ್ಯನನ್ನು ಎಲ್ಲೆಲ್ಲಿ ಕಂಡರೆ ಅಲ್ಲಲ್ಲಿ ಕೈಮುಗಿಯಿರಿ ಎಂದು ಸಂಸ್ಕೃತಿಪ್ರಪಂಚದಲ್ಲಿ ಒಂದು ವಿಶ್ವವಿಶಾಲಭಾವನೆಯನ್ನು ಬೆಳೆಸಿದವರು ಅವರು; ಹೀಗೆ, ಪಾಶ್ಚಾತ್ಯ ಸಾಹಿತ್ಯವೆಂದರೆ ಬರಿಯ ಇಂಗ್ಲಿಷ್ ಸಾಹಿತ್ಯವಲ್ಲ, ಅವೆಲ್ಲಕ್ಕೂ ಮೂಲವಾದ, ಮೇಲಾದ, ಗ್ರೀಕ್ ಸಾಹಿತ್ಯವಿದೆ ಎಂದು ಅದನ್ನು ಶಿಕ್ಷಣಕ್ಷೇತ್ರಕ್ಕೆ, ಸೃಷ್ಟಿಕ್ಷೇತ್ರಕ್ಕೆ, ತಂದವರು ಅವರು. ಈ ಕೆಲಸವನ್ನು ಅವರು "ಅಶ್ವತ್ಥಾಮನ್," "ಪಾರಸಿಕರು"ಗಳನ್ನು ಬರೆದುಮಾಡಿದ್ದಕ್ಕಿಂತ ಹೆಚ್ಚಾಗಿ ಪಾಠಹೇಳಿ ಮಾಡಿದರು. ಕನ್ನಡದ ಕಡೆ ಯಲ್ಲಿಯೂ ಹೀಗೆಯೇ ತಮಿಳಿನ ಪ್ರಾಶಸ್ತ್ಯವನ್ನು ತೋರಿಸಿದರು.—ಮೈಸೂರು

ವಿಶ್ವವಿದ್ಯಾನಿಲಯದಲ್ಲಿ, ನಮಗೆ ತಿಳಿದಮಟ್ಟಿಗೆ, ಗ್ರೀಕ್ ಸಾಹಿತ್ಯ ತಮಿಳು ಸಾಹಿತ್ಯ ಗಳ ಪ್ರಚಾರ ಮಾಡಿದವರು ಅವರಂಥವರು ಇನ್ನೊಬ್ಬರಿಲ್ಲ.

ಅವರು ಬಹು ದಿವಸದಿಂದ ಮಹಾರಾಜಾ ಕಾಲೇಜಿನ ಕರ್ಣಾಟಕ ಸಂಘದ ಮತ್ತು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದ ಅಧ್ಯಕ್ಷರಾಗಿ, ಪ್ರಬುದ್ಧ ಕರ್ಣಾಟಕ ಸಂಪಾದಕ ಮಂಡಲಿಯ ಮತ್ತು ಕನ್ನಡ ಗ್ರಂಥಪ್ರಕಾಶನ ಸಮಿತಿಯ ಅಧ್ಯಕ್ಷರಾಗಿ, ಅವುಗಳಿಗೆ ದುಡಿದಿದ್ದಾರೆ. ಅವರು ತಮ್ಮ ಸರ್ಕಾರಿಯ ಉದ್ಯೋಗ ದಿಂದ ನಿವೃತ್ತರಾಗಿ ಇವುಗಳಿಂದ ಕಳಚಿಕೊಂಡರೂ ಅವರ ಆದರ ಸ್ನೇಹ ವಿಶ್ವಾಸ ಗಳು ಏನೂ ಕಡಮೆಯಾಗಿಲ್ಲ; ಅವು ಕನ್ನಡಕ್ಕೆ, ಪರಿಷತ್ತಿನ ಮೂಲಕ, ಇಮ್ಮಡಿ ಯಾದುವು, ಮಿಾಸಲಾದುವು.

ಈ ಇಬ್ಬರು ಕನ್ನಡಿಗ ಮಹೋದಯರ ದೇಶಾಭಿಮಾನ ಭಾಷಾಭಿಮಾನ ಗಳಿಂದ ಕನ್ನಡಿಗರು ಇನ್ನೂ ಹೆಚ್ಚು ಪ್ರಯೋಜನ ಪಡೆಯುವಂತೆ ಅವರಿಗೆ ಭಗ ವಂತನು ಆಯುರಾರೋಗ್ಯಗಳನ್ನು ದಯಪಾಲಿಸಲೆಂದು ಪ್ರಾರ್ಥಿಸುತ್ತೇವೆ.

---

## ಪ್ರಾಚ್ಯಲೇಖನಾವಳಿ

**Bulletin of the Deccan College Research Institute.**—Vol. III, No. 1

Anthropometric Investigation of the Mādhyandena Brahmins of the Marāthā Country. By IRAVATI KARVE.

**I. H. Q.**—December 1941.

The Dramas ascribed to Bhāsa—S. K. De

[The dramas have wrestled with and conquered time; and even if we cannot historically fit them in, they have an unmistakable dramatic, if not poetic, quality, and this would make them deserve a place of their own in the history of the Sanskrit drama.]

**J. O. R.**—Madras. Oct. Dec., 1940 (Feb. 1942)

1. Technical terms in the Ashtadhyayi—K. Madhava Krishna Sarma.
2. Vedic Studies I—The act of Truth in the Rgveda.—Dr. A. Venkatasubbiah.
3. The Concept of Keynote in the Taittieriya Pratīsakhya—C. R. Sankaran.
4. The works of Abhinavaguptha—V. Raghavan.
5. Tolkappiam (iv ವಿಳಿಮರಪಿಯಲ್)—P. S. Subrahmanyasastri.

**J. R. A. S.**—(Part 3. 1941).

The Puranic Line of Heroes—By W. Ruben.

**Journal of the Madras University.**—July, 1941.

Nālandā—K. A. Nilakantasastri.

**Journal of the Royal Asiatic Society of Bengal.**—Science—Vol. VII, 1941. No. 1.

Racial affiliation of the Gonds of the Central Provinces—D. N. Majumdar.

Do—Letters.

(1) Seasonal Nomadism and Economics of the Chenchus of Hyderabad—CHRISTOPH VON FURER HAIMENDORF.

(2) Rock engravings of the Middle Indus—M. E. AND D. H. GORDON.

**J.A.O.S.**—September, 1941.

The Krishnacarita in the Harivamsa and certain Puranas—RUBEN WALTER.

**Indian Art and Letters.**—First issue for 1941.

1. Osmania University and the Growth of Urdu Literature—RANJEE G. SHAHANI.

    [English should be made the common language of India. . . . It will keep us in touch with the best that is known and written in the world. Urdu, Sanskrit, or what you will, belong to outmoded dialects of thought and feeling].

2. The Sanskrit Drama—BY STANLEY RICE.

**Language** (Journal of the Linguistic Society of America).—July-Sept., 1941.

A Phonemic Interpretation of Visarga—BY ALLAN HARRISON FRY.

**Modern Review.**—February, 1942.

Census of 1941—Population Figures—BY R. K. TRIVEDI.

**ಧಾರವಾಡ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯ ಸಾಹಿತ್ಯ ಸಮಿತಿ ಪತ್ರಿಕೆ**—ಜನವರಿ, ೧೯೪೨.

೧. ಶ್ರೀ ಜ್ಞಾನದೇವನ ಮತ—ಶ್ರೀ. ಪುರಾಣಿಕ ಬುದ್ಧಯ್ಯ ಸ್ವಾಮಿಗಳು, ಧಾರವಾಡ.

(ಇವನ ತತ್ತ್ವಗಳು ವೀರಶೈವರ ತತ್ತ್ವಗಳ ಪುನರಾವೃತ್ತಿಯೇ. . . . ವೀರಶೈವರಂತೆ ಹುಟ್ಟಿ ಬೆಳೆದು ಗತಿಹೊಂದಿದವನು ವೀರಶೈವನಾಗದೆ ಯಾವ ಮತದವನಿರಬಹುದು ?)

೨. ಹೈಗ, ಹೈವೆ—ಅನುಬಂಧ. ಗರುಡನು ಅನಾರ್ಯನೋ ? ಆರ್ಯನೋ ?—ಶ್ರೀ. ಎಂ. ಗೋವಿಂದಪೈ.

(ಜೀಮೂತವಾಹನನ ಕಥೆಯಲ್ಲಿಯ ಗರುಡನು ಸಿದ್ಧವಿದ್ಯಾಧರನಂತೆ ಆರ್ಯನೇ ವಿನಾ ನಾಗರಂತೆ ಅನಾರ್ಯನಲ್ಲ. . . . ಗರುಡ ಎಂಬ ಹೆಸರು ಕೇವಲ ಅನ್ವರ್ಥ ನಾಮವಲ್ಲದೆ ಜಾತಿನಾಮವೂ ಅಲ್ಲ. ಅಂಕಿತನಾಮವೂ ಅಲ್ಲ.)

೩. ಸಾಹಿತ್ಯ ಪ್ರಪಂಚದಲ್ಲಿ ವಚನಗಳ ಸ್ಥಾನ—ಶ್ರೀ. ಎ. ರು. ಕೊಪ್ಪಳ, ಎಂ.ಎ., ಬಿ.ಟಿ.

೪. "ತ್ರಿಲಿಂಗ" ಶಬ್ದದಿಂದ "ತೆಲುಗು"—ಶ್ರೀ. ಜ. ಪ. ಚನ್ನಬಸವರಾಜ ದೇಶಿಕೇಂದ್ರ ಸ್ವಾಮಿಗಳು.

(ತ್ರಿಲಿಂಗಗಳೇ:—ಇಷ್ಟ, ಪ್ರಾಣ, ಭಾವ—ವೀರಶೈವತ್ವದ ಹೆಗ್ಗುರುತುಗಳು. . .

ತೆಲುಗುನಾಡು, ತ್ರಿಲಿಂಗ—ವೀರಶೈವ—ಮತಾಚಾರ್ಯರ ಉತ್ಪತ್ತಿ ದೇಶವಾದ್ದರಿಂದ ಇದಕ್ಕೆ "ತ್ರಿಲಿಂಗ" ದೇಶವೆಂದು ಏಕೆ ಹೆಸರು ಬಂದಿರಬಾರದು?)

೫. Guddapur Danamma (ಪರದಾನಿಗುಡ್ಡಮ್ಮ)—V. B. HALBHAVI.

೬. Ethics of Veerashaivism—V. C. YAGATI.

೭. The 12th Century Kannada Literature—S. S. MALWAD.

**ಶಿವಾನುಭವ**—ಸಂಪುಟ ೧೬, ಸಂಚಿಕೆಗಳು ೧—೫ (ಅಕ್ಟೋಬರ್, ೧೯೪೧—ಫೆಬ್ರುವರಿ, ೧೯೪೨.)

೧. ಅಗರಖೇಡದ ಶಿಲಾಶಾಸನವು—ರಾ. ಬ. ಹಳಕಟ್ಟಿ.

(ಈ ಶಾಸನವು ರಾಯಮುರಾರಿ ಸೋವಿದೇವನ ಕಾಲದ್ದು. ಕ್ರಿ. ಶ. ೧೧೭೦. ಈ ಶಾಸನದಲ್ಲಿ ಹೇಳಿದ ಬಸವರಸನು ಬಸವೇಶ್ವರನಲ್ಲ. ಅಗರಖೇಡವು ಬಿಜಾಪುರ ಜಿಲ್ಲೆಯ ಇಂಡಿ ತಾಲ್ಲೂಕಿನಲ್ಲಿದೆ.)

೨. ಬಸವೇಶ್ವರನ ಚರಿತ್ರೆ—ರಾ. ಬ. ಹಳಕಟ್ಟಿ; ಲೇಖಾಂಕಗಳು ೩—೬.

೩. ಸಂಕೀರ್ಣವಚನಗಳು, ೬೨—೭೭.

೪. ಸಟೀಕ ಏಕೋತ್ತರಶತ ಸ್ಥಲ, ೩೩—೪೦.

೫. ಹರಿಹರನ ರಗಳೆ, ಭಾಗ ೮, ೪೯—೬೪.

೬. ಕನ್ನಡಸಾಹಿತ್ಯಕ್ಕೆ ಬಸವಣ್ಣನವರ ಕಾಣಿಕೆ—ಶ್ರೀ. ಜೀರಗೆ ಕ. ಬಸವಪ್ಪ, ಬಿ.ಎ.

೭. ವೀರಶೈವ ಸಂಶೋಧನೆ—ಶ್ರೀ. ದೇಸಾಯಿ ಪಾಂಡುರಂಗರಾಯರು, ಎಂ.ಎ.

(೧) ಒಂದು ವಿಚಿತ್ರ ವೀರಶೈವ ಸ್ಥಳ.

(ಜತ್ತಸಂಸ್ಥಾನದ ಬಾಲೇಗಾಂವ ಎಂಬ ಊರಲ್ಲಿ ಪ್ರಭುದೇವರ ಒಂದು ಸ್ಮಾರಕವಿದೆ. ಇದು ಯಾವ ಪ್ರಭುದೇವರ ಎಂತಹ ಸ್ಮಾರಕ? ಈ ಊರು ಅಲ್ಲಮ ಪ್ರಭುಗಳು ಕೆಲಕಾಲ ತಂಗಿದ ಸ್ಥಳವೇ?)

(೨) ದಾನಮ್ಮನ ಗುಡ್ಡಾಪುರ.

(ಜತ್ತಿಯಿಂದ ಪೂರ್ವಕ್ಕೆ ಸುಮಾರು ೧೫ ಮೈಲಿಯಲ್ಲಿದೆ.)

೮. ವಿಜಯನಗರ ಸಾಮ್ರಾಜ್ಯದ ವೀರಶೈವ ಸಾಹಿತ್ಯ—ಶ್ರೀ. ಎಸ್. ಷಣ್ಮುಖ ವೀರಾಪುರ.

೯. ಕರ್ಣಾಟಕದಲ್ಲಿ ಸಿದ್ಧನಾಥರು—ಶ್ರೀ ದೇಸಾಯಿ ಪಾಂಡುರಂಗರಾಯರು, ಎಂ.ಎ.

೧೦. ವೀರಶೈವವು ಎತ್ತ ಸಾಗಿದೆ?—ಶ್ರೀ. ವಿ. ರು. ಕೊಪ್ಪಳ.

೧೧. ಶಿವಾನುಭವ ಶಬ್ದಕೋಶ—ರಾ. ಸಾ. ಪಿ. ಜಿ. ಹಳಕಟ್ಟಿ. —೯೨.

# ಮೈಸೂರು ವಿಶ್ವವಿದ್ಯಾನಿಲಯದ ಪ್ರಚಾರ ಪುಸ್ತಕಮಾಲೆ

ಬೆಲೆ: ಸಾಧಾರಣ ಪ್ರತಿಗೆ ೨ ಆಣೆ; ಉತ್ತಮ ಪ್ರತಿಗೆ ೩ ಆಣೆ

೧. ಖಗೋಳಶಾಸ್ತ್ರಪ್ರವೇಶ—ಸಿ. ಎನ್. ಶ್ರೀನಿವಾಸ ಅಯ್ಯಂಗಾರ್, ಡಿ.ಎಸ್‌ಸಿ.
೨. ಸಮಾಜದ ರೋಗರುಜಿನಗಳು—ಜಿ. ಹನುಮಂತರಾವ್, ಎಂ.ಎ.
೩. ತೆರಿಗೆ—ಬಿ. ಆರ್. ಸುಬ್ಬರಾವ್, ಎಂ.ಎ.
೪. ನವರತ್ನಗಳು—ಎಚ್. ಸುಬ್ಬಾಜೋಯಿಸ್, ಎಂ.ಎಸ್‌ಸಿ.
೫. ನಮ್ಮ ಹಳ್ಳಿಗಳು—ಜಿ. ಎನ್. ಕೃಷ್ಣಮೂರ್ತಿ, ಎಂ.ಎ.
೬. ಕುಮಾರವ್ಯಾಸ—ಎಸ್. ವಿ. ರಂಗಣ್ಣ, ಎಂ.ಎ.
೭. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್, ಎಂ.ಎ.
೮. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ, ಎಂ.ಎ.
೯. ವಿದ್ಯುಚ್ಛಕ್ತಿಯ ವೈಭವ—ಬಿ. ಎ. ಕೃಷ್ಣಸ್ವಾಮಿರಾವ್, ಎಂ.ಎಸ್‌ಸಿ.
೧೦. ಪಂಪ—ಟಿ. ಎಸ್. ಶ್ರೀಕಂಠಯ್ಯ, ಎಂ.ಎ.
೧೧. ಪ್ರಾಣಿಜೀವನ—ಎ. ನಾರಾಯಣರಾವ್, ಎಂ.ಎಸ್‌ಸಿ.
೧೨. ಕನಸುಗಳು—ಎನ್. ಎಸ್. ನಾರಾಯಣಶಾಸ್ತ್ರಿ, ಎಂ.ಎ.
೧೩. ಮದುವೆಯ ಇತಿಹಾಸ—ಎನ್. ಕಸ್ತೂರಿ, ಎಂ.ಎ., ಬಿ.ಎಲ್.
೧೪. ನಮ್ಮ ಆರ್ಥಿಕ ದೃಷ್ಟಿ—ಎಸ್. ಗೋಪಾಲಸ್ವಾಮಿ, ಎಂ.ಎ.
೧೫. ವಾಯುಗುಣ—ಕೆ. ಶೇಷಾದ್ರಿ ಅಯ್ಯಂಗಾರ್, ಎಂ.ಎಸ್‌ಸಿ., ಎಲ್‌ಎಲ್.ಬಿ.
೧೬. ಬೆಳಕು—ಟಿ. ಎಸ್. ಸುಬ್ಬರಾಯ, ಎಂ.ಎಸ್‌ಸಿ.
೧೭. ಕನ್ನಡ ಕಾದಂಬರಿ—ವಿ. ಸೀತಾರಾಮಯ್ಯ, ಎಂ.ಎ.
೧೮. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್, ಎಂ.ಎ.
೧೯. ಇಂಗ್ಲೆಂಡಿನ ರಾಜಕೀಯ ಬೆಳವಣಿಗೆ—ಪಿ. ಜಿ. ಸತ್ಯಗಿರಿನಾಥನ್, ಎಂ.ಎ.
೨೦. ಕಣ್ಣು ಮತ್ತು ಅದರ ರಕ್ಷಣೆ—ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೨೧. ಸಾರ್ವಜನಿಕ ವೆಚ್ಚ—ಎಂ. ಎಚ್. ಗೋಪಾಲ್, ಎಂ.ಎ., ಪಿಎಚ್.ಡಿ.
೨೨. ಶಿಶುಪಹಾರಗಳು—ಸಿ. ರಂಗಾಚಾರ್, ಬಿ.ಎಸ್‌ಸಿ., ಎಂ.ಎಡ್.
೨೩. ಸಂಖ್ಯೋದ್ಯಾನ—ಬಿ. ಸೀತಾರಾಮಶಾಸ್ತ್ರಿ, ಎಂ.ಎ.
೨೪. ವಿಡಂಬನ—ಎಸ್. ವಿ ರಂಗಣ್ಣ, ಎಂ.ಎ.
೨೫. ಎಲ್ಲೋರ ಮತ್ತು ಅಜಂತಾ—ಎಂ. ಎಚ್. ಕೃಷ್ಣ, ಎಂ.ಎ., ಡಿ.ಲಿಟ್.
೨೬. ಸಾರಜನಕದ ಮಹತ್ವ—ಎಚ್. ಸುಬ್ಬಜೋಯಿಸ್, ಎಂ.ಎಸ್‌ಸಿ.
೨೭. ಭಾಸ—ಎಚ್. ಎಲ್. ಹರಿಯಪ್ಪ, ಎಂ.ಎ.
೨೮. ಪಾಶ್ಚಾತ್ಯ ರಾಜಕೀಯ ತತ್ವಗಳು—ಎಂ. ಯಾಮುನಾಚಾರ್ಯ, ಎಂ.ಎ.
೨೯. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.
೩೦. ರಕ್ತ—ಡಿ. ಶಾಮಣ್ಣ, ಬಿ.ಎ., ಎಂ.ಬಿ., ಬಿ.ಎಸ್.
೩೧. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್, ಎಂ.ಎ.
೩೨. ಅಕ್ಕಮಹಾದೇವಿ—ಎಸ್. ಪಿ. ಪರಮೇಶ್ವರಭಟ್ಟ, ಎಂ.ಎ.

ವಾರ್ಷಿಕ ಚಂದಾ—ಸಾಧಾರಣ ಪ್ರತಿ ರೂ. ೧—೪—೦   ಉತ್ತಮ ಪ್ರತಿ ರೂ. ೨—೦—೦

ಸಂಪಾದಕ, ಪ್ರಚಾರ ಪುಸ್ತಕಮಾಲೆ, ಯೂನಿವರ್ಸಿಟಿ ಆಫೀಸು, ಮೈಸೂರು.

# ಮೈಸೂರು ವಿಶ್ವವಿದ್ಯಾನಿಲಯ ಕನ್ನಡ ಗ್ರಂಥಮಾಲೆ

ಬೆಲೆ: ಕ್ಯಾಲಿಕೊ ರೂ. ೧—೪—೦, ಸಾದಾ ೧೨ ಆಣೆ.

ಪ್ರಧಾನಸಂಪಾದಕರು : ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್.

೧. **ಹರಿಶ್ಚಂದ್ರಕಾವ್ಯ ಸಂಗ್ರಹ** (ತೃತೀಯ ಮುದ್ರಣ)—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ. ಮತ್ತು ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೨. **ಕರ್ಣಾಟಕ ಕಾದಂಬರೀ ಸಂಗ್ರಹ**—ಸಂಪಾದಕರು : ಟಿ. ಎಸ್. ವೆಂಕಣ್ಣಯ್ಯ, ಎಂ.ಎ.

೩. **ಪ್ರಭುಲಿಂಗಲೀಲೆಯ ಸಂಗ್ರಹ** (ಸಚಿತ್ರ)—ಸಂಪಾದಕರು : ಎಂ. ಎಸ್. ಬಸವಲಿಂಗಯ್ಯ, ಎಂ.ಎ., ಬಿ.ಎಲ್. ಮತ್ತು ಎಂ. ಆರ್. ಶ್ರೀನಿವಾಸಮೂರ್ತಿ, ಬಿ.ಎ.

೪. **ಸಾಕ್ರೆಟೀಸನ ಕೊನೆಯ ದಿನಗಳು** (ಸಚಿತ್ರ)—ಅನುವಾದಕರು : ಎ. ಎನ್. ಮೂರ್ತಿರಾವ್, ಎಂ.ಎ.

೫. **ಶ್ರೀರಾಮಕೃಷ್ಣ ಪರಮಹಂಸ**—ಲೇಖಕರು : ಕೆ. ವಿ. ಪುಟ್ಟಪ್ಪ, ಎಂ.ಎ.

೬. **ರವೀಂದ್ರನಾಥ ಠಾಕೂರರು** (ಸಚಿತ್ರ)—ಲೇಖಕರು : ಮಾಸ್ತಿ ವೆಂಕಟೇಶ ಐಯಂಗಾರ್, ಎಂ.ಎ.

೭. **ಆರೋಗ್ಯ ಅದರ ಜ್ಞಾನ ಮತ್ತು ಸಾಧನ** (ಸಚಿತ್ರ)—ಲೇಖಕರು : ಜೆ. ಎ. ಈಶ್ವರ ಮೂರ್ತಿ, ಬಿ.ಎ., ಎಲ್.ಎಂ.ಎಸ್., ಬಿ.ಎಸ್.ಎಸ್ಸಿ.

೮. **ಪಂಪರಾಮಾಯಣ ಸಂಗ್ರಹ**—ಸಂಪಾದಕರು: ಆಸ್ಥಾನಮಹಾವಿದ್ವಾನ್ ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್ ಮತ್ತು ಡಿ. ಎಲ್. ನರಸಿಂಹಾಚಾರ್, ಎಂ.ಎ.

೯. **ಹಣ ಪ್ರಪಂಚ**—ಲೇಖಕರು : ವಿ. ಸೀತಾರಾಮಯ್ಯ, ಎಂ.ಎ.

೧೦. **ಸಂಸ್ಕೃತ ನಾಟಕ**—ಲೇಖಕರು : ಎ. ಆರ್. ಕೃಷ್ಣಶಾಸ್ತ್ರೀ, ಎಂ.ಎ.

೧೧. **ಜೀವವಿಜ್ಞಾನ**—ಲೇಖಕರು : ಬಿ. ವೆಂಕಟನಾರಾಯಣಪ್ಪ, ಎಂ.ಎ.

೧೨. **ಹಿಂದೂದರ್ಶನಸಾರ**—ಲೇಖಕರು : ಪಂಡಿತರತ್ನಂ ಲಕ್ಷ್ಮೀಪುರಂ ಶ್ರೀನಿವಾಸಾಚಾರ್ಯರು.

೧೩. **ರಾಜನೀತಿ**—ಲೇಖಕರು : ಎಚ್. ಕೃಷ್ಣರಾವ್, ಎಂ.ಎ.

೧೪. **ಹದಿಬದೆಯ ಧರ್ಮ**—ಸಂಪಾದಕಿಯರು: ಡಿ. ಚಂಪಾಬಾಯಿ, ಎಂ.ಎ.

೧೫. **ಪುರಾಣನಾಮ ಚೂಡಾಮಣಿ**—ಲೇಖಕರು : ಬೆಸಗರ್ ರಾಮರಾವ್, ಎಂ.ಎ., ಎಲ್ ಎಲ್.ಬಿ., ಮತ್ತು ಪಾಸ್ಯಂ ಸುಂದರಶಾಸ್ತ್ರಿ, ಬೆಲೆ, ರೂ.೩-೪-೦

೧೬. **ಯಶೋಧರ ಚರಿತ್ರೆಯ ಸಂಗ್ರಹ**—ಸಂಪಾದಕರು : ಕೆ. ವಿ. ರಾಘವಾಚಾರ್, ಎಂ.ಎ., ಪಿ.ಟಿ.

**ಕ್ಯೂರೇಟರ್, ಓರಿಯೆಂಟಲ್ ಲೈಬ್ರೆರಿ, ಮೈಸೂರು.**

ಮೈಸೂರು ಮಹಾರಾಜರವರ ಕಾಲೇಜಿನ

# ಕರ್ಣಾಟಕ ಸಂಘದ ಪ್ರಕಟನೆಗಳು

---

## ಕುಮಾರವ್ಯಾಸ ಪ್ರಶಸ್ತಿ

ಚೆಲೆ, ಕ್ಯಾಲಿಕೊ ಪ್ರತಿ ರೂ. ೨-೮-೦ ; ಸಾದಾ ಪ್ರತಿ ರೂ. ೨-೦-೦

ದೊರೆಯುವ ಸ್ಥಳ :

**ಕರ್ಣಾಟಕ ಸಂಘ,**
**ಸೆಂಟ್ರಲ್ ಕಾಲೇಜು, ಬೆಂಗಳೂರು**

**ಕರ್ಣಾಟಕ ಸಂಘ,**
**ಶಿವಮೊಗ್ಗ**

---

**ಕಿರಿಯಕಾಣಿಕೆ** (ಎರಡನೆಯ ಮುದ್ರಣ)—ಕ್ಯಾಲಿಕೊ ಪ್ರತಿ ರೂ. ೧- ೮-೦
**ತಳಿರು** (ಪ್ರತಿಗಳು ಮುಗಿದಿವೆ)—

ಮಾರಾಟಗಾರರು :

**ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು**

---

**ಆಷಾಢಭೂತಿ** (ಶ್ರೀ. ಎ. ಎನ್. ಮೂರ್ತಿರಾವ್, ಎಂ.ಎ. ಅವರಿಂದ)—
ಕ್ಯಾಲಿಕೊ ಪ್ರತಿ ರೂ. ೧-೮-೦

**ಸಾವಿನ ಸಮಸ್ಯೆ** (ಶ್ರೀ. ವೆಂಬಾರ್ ವೆಂಕಟಾಚಾರ್ಯ, ಎಂ.ಎ., ಬಿ.ಕಾಮ್., ಎಲ್‌ಎಲ್.ಬಿ. ಅವರಿಂದ)— ಸಾದಾ ಪ್ರತಿ ರೂ. ೦-೧೨-೦

ಮಾರಾಟಗಾರರು :

**ಕೃಷ್ಣ ಮತ್ತು ಕಂಪನಿ, ಮೈಸೂರು**

---

## ಹೊಸ ಪ್ರಕಟನೆ

**ಮೈಸೂರ ಮಲ್ಲಿಗೆ** (ಸಚಿತ್ರ ಕವನ ಸಂಗ್ರಹ)—ಶ್ರೀ ಕೆ. ಎಸ್. ನರಸಿಂಹ ಸ್ವಾಮಿ ಅವರಿಂದ. ಚೆಲೆ, ಕ್ಯಾಲಿಕೊ ಪ್ರತಿ ರೂ. ೧-೪-೦ ; ಸಾದಾ ಪ್ರತಿ ರೂ. ೦-೧೨-೦

**ಕಾರ್ಯದರ್ಶಿ, ಕರ್ಣಾಟಕ ಸಂಘ, ಮಹಾರಾಜರವರ ಕಾಲೇಜು,**
**ಮೈಸೂರು**

# ಪ್ರಬುದ್ಧ ಕರ್ಣಾಟಕ

---

ಸಂಪುಟ ೨೩

(ವೃಷ ಸಂವತ್ಸರ)




ಮೈಸೂರು:

ಮೈಸೂರು ವಿಶ್ವವಿದ್ಯಾನಿಲಯ

೧೯೪೨

# ವಿಷಯ ಸೂಚಿಕೆ

(ವೃಷ ಸಂವತ್ಸರ—ಸಂಪುಟ ೨೩)

## ೧. ಕವನಗಳು—



## ೨. ನಾಟಕ—



## ೩. ಸಾಹಿತ್ಯವಿಚಾರ—

೧೬. ಚಿತ್ರಗಳು—

# ಪ್ರಬುದ್ಧ ಕರ್ಣಾಟಕಕ್ಕೆ ವಿನಿಮಯವಾಗಿ ಬರುವ ಪತ್ರಿಕೆಗಳು

## ಇಂಗ್ಲಿಷ್ ಪತ್ರಿಕೆಗಳು

*Annals of the Oriental Research Institute*, University, Madras; *Bramhavidya*, Adyar, Madras; *Bulletin of the School of Oriental Studies*, London; *Journal of the Andhra Historical Research Society*, Rajahmundry; *Journal of the Karnataka Historical Research Society*, Dharwar; *Quarterly Journal of the Mythic Society*, Bangalore; *United Karnataka*, Dharwar; *Annals of the Venkateswara Oriental Institute*, Tirupathi; *The Jaina Siddhantha Bhaskara and the Jaina Gazette*, Arrah; *Bulletin of the Deccan College Research Institute*, Poona; *Publication of the Kannada Research Office*, Dharwar; *Fergusson College Magazine*, Poona; *Karnataka College Miscellany*, Dharwar; *The Journal of the Literary Committee of the L.E. Association*, Dharwar.

## ವಾರಪತ್ರಿಕೆಗಳು

'ಒಕ್ಕಲಿಗರ ಪತ್ರಿಕೆ', ಬೆಂಗಳೂರು; 'ಕನ್ನಡ ನುಡಿ', ಬೆಂಗಳೂರು; 'ಕಂಠೀರವ', ಮಂಗಳೂರು; 'ತರುಣಕರ್ನಾಟಕ', ಹುಬ್ಬಳ್ಳಿ; 'ತಾಯಿನಾಡು', ಬೆಂಗಳೂರು; 'ನವಸಂದೇಶ', ಬಳ್ಳಾರಿ; 'ರಾಷ್ಟ್ರಬಂಧು', ಮಂಗಳೂರು; 'ವಿಶ್ವಕರ್ಣಾಟಕ', ಬೆಂಗಳೂರು; 'ಸ್ವದೇಶಾಭಿಮಾನಿ', ಮಂಗಳೂರು.

## ಮಾಸಪತ್ರಿಕೆಗಳು

'ಅಧ್ಯಾತ್ಮ ಪ್ರಕಾಶ', ಹೊಳೇನರಸೀಪುರ; 'ಆಂಧ್ರ ಸಾಹಿತ್ಯ ಪರಿಷತ್ಪತ್ರಿಕೆ' (ತೆಲುಗು), ಕಾಕನಾಡ; 'ಕತೆಗಾರ', ಬೆಂಗಳೂರು; 'ಕನ್ನಡ ಸಹಕಾರಿ', ಮಂಗಳೂರು; 'ಜಯಕರ್ನಾಟಕ', ಧಾರವಾಡ; 'ಜಯಂತಿ', ಧಾರವಾಡ; 'ಭಾರತಿ' (ತೆಲುಗು), ಮದರಾಸು; 'ಮೈಸೂರು ವ್ಯವಸಾಯ ಶೋಧಕ ಸಂಘದ ಪತ್ರಿಕೆ', ಬೆಂಗಳೂರು; 'ಮಕ್ಕಳ ಪುಸ್ತಕ', ಬೆಂಗಳೂರು; 'ಮೈಸೂರು ಸಹಕಾರ ಪತ್ರಿಕೆ', ಬೆಂಗಳೂರು; 'ವಿಚಾರವಾಹಿನಿ', ತೀರ್ಥಹಳ್ಳಿ; 'ವಿದ್ಯಾದಾಯಿನಿ', ಮೈಸೂರು; 'ವಿಮಾ ವಾಣಿಜ್ಯ', ಬೆಂಗಳೂರು; 'ವಿವೇಕಾಭ್ಯುದಯ', ಮೈಸೂರು; 'ಶರಣಸಾಹಿತ್ಯ', ಬೆಂಗಳೂರು; 'ಶಿವಾನುಭವ', ಬಿಜಾಪುರ; 'ಸದ್ಬೋಧಚಂದ್ರಿಕೆ', ಅಗಡಿ; 'ಸರಸ್ವತಿ', ಬೆಂಗಳೂರು; 'ಸುದರ್ಶನ', ಮೈಸೂರು; 'ಸುಬೋಧ', ಬೆಂಗಳೂರು; 'ಜೀವನ', ಧಾರವಾಡ; 'ಕಥಾಂಜಲಿ', ಬೆಂಗಳೂರು; 'ವಿಭೂತಿ' (ತೆಲುಗು), ಸಿಕಿಂದ್ರಾಬಾದು; 'ಕಥಾವಳಿ', ಬೆಂಗಳೂರು.

## ತ್ರೈಮಾಸಿಕ ಪತ್ರಿಕೆಗಳು

'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', ಬೆಂಗಳೂರು; 'ಗರಿಕೆ', ಮೈಸೂರು; 'ದೇಶೀಯ ವಿದ್ಯಾಶಾಲಾ ಪತ್ರಿಕೆ', ಬೆಂಗಳೂರು; 'ಭಾರತ ಇತಿಹಾಸ ಸಂಶೋಧನ ಮಂಡಲದ ಪತ್ರಿಕೆ' (ಮರಾಠಿ), ಪೂನಾ; 'ಶ್ರೀಮನ್ ಮಹಾರಾಜ ಸಂಸ್ಕೃತ ಮಹಾಪಾಠಶಾಲಾ ಪತ್ರಿಕಾ', ಮೈಸೂರು.

## ಗ್ರಂಥಮಾಲೆ

'ಮನೋಹರ ಗ್ರಂಥಮಾಲೆ', ಧಾರವಾಡ; 'ಮಿಂಚಿನಬಳ್ಳಿ', ಧಾರವಾಡ.